KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೫ | ಬೆಂಗಳೂರು, ಗುರುವಾರ, ಜುಲೈ ೨೨, ೨೦೧೦ (ಆಷಾಢ ೩೧, ಶಕ ವರ್ಷ ೧೯೩೨) | ಸಂಚಿಕೆ ೨೯ |
|---|---|---|



## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಕೊಪ್ಪಳ ಜಿಲ್ಲೆ ಹಾಗೂ ತಾಲ್ಲೂಕಿನ ಕಾತರಕಿ–ಗುಡ್ಲಾನೂರು ಏತ ನೀರಾವರಿ ಯೋಜನೆ ಕಾಮಗಾರಿಯ ಟೆಂಡರನ್ನು ಅನುಮೋದಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 30 ಏನೀಯೋ 2007, ದಿನಾಂಕ 17–12–2007.
2. ದಿನಾಂಕ 27–3–2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ : ಮುಇಂ/ಸನೀ(ಉ)ವ/ ತಾ.ಸ–3/ಸ.ಇಂ.–7/ಕಾತರಕಿ–ಗುಡ್ಲಾನೂರ/2009–10/2153
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 24–3–2010ರ ಪತ್ರ ಸಂಖ್ಯೆ : ಮುಸದ/ಆಪ್ತ ಶಾಖೆ/ಟೆಂಡರ್/8–9/744

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ ಹಾಗೂ ತಾಲ್ಲೂಕಿನ ಕಾತರಕಿ–ಗುಡ್ಲಾನೂರು ಏತ ನೀರಾವರಿ ಯೋಜನೆ ಕಾಮಗಾರಿಯ 27.70 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ನೋಂದಣಿ ಸಂಖ್ಯೆ : 229/2009–10ರಡಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್ ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 20–02–2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 23–02–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸಿರುವುದಾಗಿ ವರದಿಯಾಗಿದೆ. ಸದರಿ ಗುತ್ತಿಗೆದಾರರ ಟೆಂಡರನ್ನು ದಿನಾಂಕ : 3–3–2010ರಂದು ತೆರೆದು ಪರಿಶೀಲಿಸಲಾಗಿದ್ದು ಅವರು ಅರ್ಹರೆಂದು ಪರಿಗಣಿಸಿದ್ದು ವಿವರಗಳು ಕೆಳಕಂಡಂತಿವೆ :

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 27,27,189/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ವೀರಯ್ಯ ಹೀರೇಮಠ, ಒಂದನೇ ದರ್ಜೆ ಗುತ್ತಿಗೆದಾರರು | 30,38,929/– | 11.43 ಹೆಚ್ಚು |

ಮೇಲ್ಕಂಡಂತೆ ಶ್ರೀ ವೀರಯ್ಯ ಹೀರೇಮಠ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.43 ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23-3-2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 27,27,189/-ಗಳ ಮೇಲೆ ಶೇಕಡ 11.20 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 30,32,634/-ಗಳಿಗೆ ಕಾಮಗಾರಿಯನ್ನು ಶ್ರೀ ವೀರಯ್ಯ ಹೀರೇಮಠ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 28 ಏನೀಯೋ 2010 ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆ ಹಾಗೂ ತಾಲ್ಲೂಕಿನ ಕಾತರಕಿ-ಗುಡ್ಲಾನೂರು ಏತ ನೀರಾವರಿ ಯೋಜನೆ ಕಾಮಗಾರಿ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.27,27,189/-ಗಳ ಮೇಲೆ ಶೇಕಡ 11.20 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.30,32,634/-ಗಳಿಗೆ (ಮೂವತ್ತು ಲಕ್ಷದ ಮೂವತ್ತೆರಡು ಸಾವಿರದ ಆರು ನೂರ ಮೂವತ್ತಾನ್ಲಾಲ್ಕು ರೂ.ಗಳು ಮಾತ್ರ) ಶ್ರೀ ವೀರಯ್ಯ ಹೀರೇಮಠ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20-1-2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1098

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಬಳ್ಳಾರಿ ಜಿಲ್ಲೆ ಹಾಗೂ ತಾಲ್ಲೂಕು, ಮೀನಹಳ್ಳಿ ಗ್ರಾಮದ ಪರಿಶಿಷ್ಟ ಪಂಗಡದ ರೈತರ ಹೊಲಗಳಿಗೆ ಏತ ನೀರಾವರಿ ಯೋಜನೆ ಒದಗಿಸುವ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1. ದಿನಾಂಕ 11-3-2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ ಬಿಜೆಪಿ/ಪಿಬಿ-12/2009-10/1559

2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ : ಮುಸದ/ಆಪ್ತ ಶಾಖೆ/ಟೆಂಡರ್/9-10/744, ದಿನಾಂಕ : 4-3-2010.

**ಪ್ರಸ್ತಾವನೆ :**

ಬಳ್ಳಾರಿ ಜಿಲ್ಲೆ ಹಾಗೂ ತಾಲ್ಲೂಕು, ಮೀನಹಳ್ಳಿ ಗ್ರಾಮದ ಪರಿಶಿಷ್ಟ ಪಂಗಡದ ರೈತರ ಹೊಲಗಳಿಗೆ ಏತ ನೀರಾವರಿ ಯೋಜನೆ ಒದಗಿಸುವ ಕಾಮಗಾರಿಗೆ ದಿನಾಂಕ : 25-11-09 ರಲ್ಲಿ ಮುಖ್ಯ ಇಂಜಿನಿಯರ್‌ರವರು ಆಡಳಿತಾತ್ಮಕ ಅನುಮೋದನೆ ನೀಡಿರುತ್ತಾರೆ ಹಾಗೂ ದಿನಾಂಕ 27-11-09 ರಂದು ಗುಲ್ಬರ್ಗಾ ಸಣ್ಣ ನೀರಾವರಿ ವೃತ್ತದ ಅಧೀಕ್ಷಕ ಇಂಜಿನಿಯರ್‌ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ

ಈ ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ಇ-ಪ್ರೊಕ್ಯೂರ್‌ಮೆಂಟ್ ಪದ್ಧತಿಯಲ್ಲಿ ಅಲ್ಪಾವಧಿ ಟೆಂಡರನ್ನು ಆಹ್ವಾನಿಸಿರುತ್ತಾರೆ. ಪ್ರಕಟಣೆಯ ವಿವರಗಳು ಕೆಳಕಂಡಂತಿವೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ : 04–01–2010 |
| 2 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿನಾಂಕ : 07–01–2010 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ ಇಬ್ಬರು ಗುತ್ತಿಗೆದಾರರು ನಿಗದಿತ ದಿನದಂದು ಕೇವಲ ಇಬ್ಬರು ಗುತ್ತಿಗೆದಾರರು ಮಾತ್ರ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ಟೆಂಡರ್‌ನ್ನು ದಿನಾಂಕ : 23–01–10 ರಂದು ತೆರೆಯಲಾಗಿದ್ದು, ಕೇವಲ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹರಾಗಿರುತ್ತಾರೆ. ವಿವರ ಕೆಳಕಂಡಂತಿದೆ :

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 13,81,006/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ/ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಕೆ.ಟಿ. ಪರಶುರಾಮ, 1ನೇ ದರ್ಜೆ ಗುತ್ತಿಗೆದಾರರು | ರೂ. 15,93,231/– | 15,367 ಹೆಚ್ಚು |

ಮೇಲ್ಕಂಡಂತೆ ಶ್ರೀ ಕೆ.ಟಿ. ಪರಶುರಾಮ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.15,93,231/–ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ15.367ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23–3–2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 13,81,006/–ಗಳ ಮೇಲೆ ಶೇಕಡ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 15,74,347/–ಗಳಿಗೆ ಕಾಮಗಾರಿಯನ್ನು ಶ್ರೀ ಕೆ.ಟಿ. ಪರಶುರಾಮ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 24 ಏನೀಯೋ 2009 ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ ಹಾಗೂ ತಾಲ್ಲೂಕು, ಮೀನಹಳ್ಳಿ ಗ್ರಾಮದ ಪರಿಶಿಷ್ಟ ಪಂಗಡದ ರೈತರ ಹೊಲಗಳಿಗೆ ಏತ ನೀರಾವರಿ ಯೋಜನೆ ಒದಗಿಸುವ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.13,81,006/–ಗಳ ಮೇಲೆ ಶೇಕಡ 14.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.15,74,347/–ಗಳಿಗೆ (ಹದಿನೈದು ಲಕ್ಷದ ಎಪ್ಪತ್ನಾಲ್ಕು ಸಾವಿರದ ಮುನ್ನೂರ ನಲವತ್ತೇಳು ರೂ.ಗಳು ಮಾತ್ರ) ಶ್ರೀ ಕೆ.ಟಿ.ಪರಶುರಾಮ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1099

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಹಾವೇರಿ ಜಿಲ್ಲೆ ಹಾಗೂ ತಾಲ್ಲೂಕಿನ ಗಳಗನಾಥ ಏತ ನೀರಾವರಿ ಯೋಜನೆ ಸುಧಾರಣೆ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸನೀಇ 15 ಮಸಾವಿ 2009, ದಿನಾಂಕ : 16-02-09.

2. ದಿನಾಂಕ 10-3-2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ : ಮುಇಂ/ಸನೀ(ಉ)ವ/ ಬಿಜೆಪಿ/ಎಇ-3/2009-10/1471.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 23-3-2010ರ ಪತ್ರ ಸಂಖ್ಯೆ : ಮುಸದ/ಆಪ್ತ ಶಾಖೆ/ಟೆಂಡರ್/09-10/744.

**ಪ್ರಸ್ತಾವನೆ :**

ಹಾವೇರಿ ಜಿಲ್ಲೆ ಹಾಗೂ ತಾಲ್ಲೂಕಿನ ಗಳಗನಾಥ ಏತ ನೀರಾವರಿ ಯೋಜನೆ ಸುಧಾರಣೆ ಕಾಮಗಾರಿಯ 50.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ : 16-01-09ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ : 13-11-2009 |
| 2 | ಸಂಯುಕ್ತ ಕರ್ನಾಟಕ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆಗಳು | ದಿನಾಂಕ : 17-11-2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಇಬ್ಬರು ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಳನ್ನು ಪಡೆದು ನಿಗದಿತ ದಿನದಂದು ಟೆಂಡರ್‌ನ್ನು ಸಲ್ಲಿಸಿರುತ್ತಾರೆ. ಇವರ ಟೆಂಡರ್‌ಗಳನ್ನು ದಿನಾಂಕ : 14-12-09 ರಂದು ತೆರೆಯಲಾಗಿದ್ದು,. ವಿವರ ಕೆಳಕಂಡಂತಿದೆ :

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 44,72,647/- |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ. 43,30,060/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ/ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ/ ಶೇಕಡಾವಾರು ಹೆಚ್ಚಳ |
| 1 | ಶ್ರೀ ಉದಯಕುಮಾರ್, 1ನೇ ದರ್ಜೆ ಗುತ್ತಿಗೆದಾರರು | ರೂ. 45,41,930/- | 1.55 ಹೆಚ್ಚು | 4.89 ಹೆಚ್ಚು |
| 2 | ಶ್ರೀ ಎಸ್.ಶಂಕರ್ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು | ರೂ. 51,82,185/- | 15.86 ಹೆಚ್ಚು | 19.68 ಹೆಚ್ಚು |

ಮೇಲ್ಕಂಡ ಕಾಮಗಾರಿಗೆ ಕರೆಯಲಾಗಿದ್ದ ಟೆಂಡರ್‌ನಲ್ಲಿ ಭಾಗವಹಿಸಿದ್ದ ಗುತ್ತಿಗೆದಾರರ ಪೈಕಿ ಅತ್ಯಂತ ಕನಿಷ್ಠ ದರಗಳನ್ನು ನಮೂದಿಸಿರುವ ಗುತ್ತಿಗೆದಾರರಾದ ಶ್ರೀ ಉದಯಕುಮಾರ್, ಸಿ.ಹೀರೇಗೌಡ, ಒಂದನೇ ದರ್ಜೆ ಗುತ್ತಿಗೆದಾರರು ಇವರ ಟೆಂಡರ್‌ನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 43,30,060/-ಗಳ ಮೇಲೆ ಶೇ. 4.89ರಷ್ಟು ಹೆಚ್ಚಿನ ದರಗಳಿಗೆ ಮುಖ್ಯ ಇಂಜಿನಿಯರ್ ಕಚೇರಿಯಲ್ಲಿ ಅನುಮೋದಿಸಲಾಗಿತ್ತು. ಆದರೆ ಇವರು ಗುತ್ತಿಗೆ ಕರಾರನ್ನು ಮಾಡಿಕೊಂಡಿರದೇ ಇದ್ದುದರಿಂದಾಗಿ ಸದರಿ ಟೆಂಡರುದಾರರ ಗುತ್ತಿಗೆಯನ್ನು ರದ್ದುಗೊಳಿಸಿ ಅವರ ಇ.ಎಂ.ಡಿ.ಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ.

ತದನಂತರ ಈ ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಿದ್ದ ಎರಡನೇ ಕನಿಷ್ಠ ಟೆಂಡರುದಾರರಾದ ಶ್ರೀ ಎಸ್. ಶಂಕರ್ ರೆಡ್ಡಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 19.68ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ದಿನಾಂಕ 05–04–2010ರಂದು ನಡೆದ ಸಭೆಯಲ್ಲಿ ಮೇಲ್ಕಂಡ ಕಾಮಗಾರಿಯ ಟೆಂಡರ್ ಪ್ರಕ್ರಿಯೆಯಲ್ಲಿ ಎರಡನೇ ಕನಿಷ್ಠ ಟೆಂಡರುದಾರರಾದ ಶ್ರೀ ಎಸ್. ಶಂಕರ್ ರೆಡ್ಡಿ, ಒಂದನೇ ದರ್ಜೆ ಗುತ್ತಿಗೆದಾರರು ರವರೊಂದಿಗೆ ಅವರು ಸೂಚಿಸಿದ್ದ ದರಗಳನ್ನು ಕಡಿಮೆ ಮಾಡುವ ಸಲುವಾಗಿ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಂಧಾನ ನಡೆಸಲಾಗಿರುತ್ತದೆ. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮೊದಲ ಕನಿಷ್ಠ ಗುತ್ತಿಗೆದಾರರು ಒಪ್ಪಿದ್ದ ದರಗಳ ಮೊತ್ತಕ್ಕೆ ಅಂದರೆ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 43,30,060/–ಗಳ ಮೇಲೆ ಶೇ. 4.89ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 45,41,800/– ಗಳಿಗೆ ಕಾಮಗಾರಿಯನ್ನು ನಿರ್ವಹಿಸಲು ಎರಡನೇ ಕನಿಷ್ಠ ಟೆಂಡರುದಾರರಾದ ಶ್ರೀ ಎಸ್. ಶಂಕರ್ ರೆಡ್ಡಿ ಒಪ್ಪಿರುವುದರಿಂದ ಈ ಮೊತ್ತಕ್ಕೆ ಕಾಮಗಾರಿಯನ್ನು ಸದರಿ ಗುತ್ತಿಗೆದಾರರಿಗೆ ವಹಿಸಲು ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 23 ಏನೀಯೋ 2010 ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆ ಹಾಗೂ ತಾಲ್ಲೂಕಿನ, ಗಳಗನಾಥ ಏತ ನೀರಾವರಿ ಯೋಜನೆ ಸುಧಾರಣೆ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.43,30,060/–ಗಳ ಮೇಲೆ ಶೇಕಡ 4.89 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.45,41,800/–ಗಳಿಗೆ (ನಲವತ್ತೈದು ಲಕ್ಷದ ನಲವತ್ತೊಂದು ಸಾವಿರದ ಎಂಟು ನೂರು ರೂ.ಗಳು ಮಾತ್ರ) ಶ್ರೀ ಎಸ್. ಶಂಕರ್ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1100

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಪ್ರಜ್ಞಾ ಅಮ್ಮೆಂಬಳ ಹಿಂದಿನ ತಹಶೀಲ್ದಾರ್, ಹೊಸಪೇಟೆ ತಾಲ್ಲೂಕು (ಪ್ರಸ್ತುತ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ) ಇವರ ಜನ್ಮ ದಿನಾಂಕ ತಿದ್ದುಪಡಿ ಕುರಿತು.

**ಓದಲಾಗಿದೆ :** 1. ಸಿವಿಲ್ ನ್ಯಾಯಾಲಯ (ಕಿರಿಯ ವಿಭಾಗ), ಕುಂದಾಪುರ ಇವರ ಆದೇಶ ಮೂಲ ದಾವೇ ಸಂಖ್ಯೆ : 29/2002, ದಿನಾಂಕ : 07–03–2003.

**2**. ವಿಭಾಗೀಯ ಕಾರ್ಯದರ್ಶಿಗಳು ಹಾಗೂ ಪದನಿಮಿತ್ತ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರ ಪತ್ರ ಸಂಖ್ಯೆ : ಡಿ–5/680/ಅಂ.ದೂ.ತಿ/2006–07, ದಿನಾಂಕ : 25–07–2009.

**3**. ಶ್ರೀಮತಿ ಪ್ರಜ್ಞಾ ಅಮ್ಮೆಂಬಳ, ತಹಶೀಲ್ದಾರ್ ಇವರ ಮನವಿ ದಿನಾಂಕ : 05–12–2007 ಹಾಗೂ 25–07–2009.

**ಪ್ರಸ್ತಾವನೆ :**

ಶ್ರೀಮತಿ ಪ್ರಜ್ಞಾ ಅಮ್ಮೆಂಬಳ ಹಿಂದಿನ ತಹಶೀಲ್ದಾರ್, ಹೊಸಪೇಟೆ ತಾಲ್ಲೂಕು, ಇವರ ಪ್ರಾಥಮಿಕ ಶಿಕ್ಷಣ ಪ್ರವೇಶ ಸಂದರ್ಭದಲ್ಲಿ ಶಾಲೆಯಲ್ಲಿ, ಸದರಿಯವರ ಜನ್ಮ ದಿನಾಂಕ ದಾಖಲಿಸುವಾಗ ದಿನಾಂಕ : 18–06–77 ಎಂದು ತಪ್ಪಾಗಿ ದಾಖಲಿಸಿದ್ದು, ಈ ದಿನಾಂಕವನ್ನು ಪ್ರೌಢಶಾಲೆಯಲ್ಲಿ ಕೂಡ ನಮೂದು ಆಗಿರುತ್ತದೆ. ಸದರಿಯವರು ಸಿವಿಲ್ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು, ಮಾನ್ಯ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಕುಂದಾಪುರ ಮೂಲ ದಾವೆ ಸಂ : 29/2002ನ್ನು ದಾಖಲಿಸಿ, ಸದರಿ ದಾವೆಯು ಮೇಲೆ ಓದಲಾದ ಕ್ರ.ಸಂ. (1)ರಲ್ಲಿ ದಿನಾಂಕ : 07–03–2003ರ ತೀರ್ಪಿನಲ್ಲಿ

ಜನ್ಮ ದಿನಾಂಕವನ್ನು 20-12-1977 ಎಂದು ತಿದ್ದುಪಡಿ ಮಾಡಿ, ನಮೂದಿಸಲು ಸಂಬಂಧಿಸಿದ ಪ್ರಾಧಿಕಾರಕ್ಕೆ ಆದೇಶಿಸಿರುತ್ತದೆ. ಅದರಂತೆ, ಉಪನಿರ್ದೇಶಕರು, ಉಡುಪಿ ಇವರು ದಿನಾಂಕ : 17-02-2005ರ ಜ್ಞಾಪನದಲ್ಲಿ ಮಾನ್ಯ ಕುಂದಾಪುರ ಸಿವಿಲ್ ನ್ಯಾಯಾಲಯ (ಕಿ.ವಿ.) ರಲ್ಲಿಯ ದಾವೆ ಸಂ. : 29/2002ರ ದಿನಾಂಕ : 07-03-2003ರಲ್ಲಿ ನೀಡಿರುವ ತೀರ್ಪಿನನ್ವಯ ಶ್ರೀಮತಿ ಪ್ರಜ್ಞಾ ಅಮ್ಮೆಂಬಳ ಬಿನ್ ಶ್ರೀ ಎ. ವಾಸುದೇವ ನಾವಡ ರವರ ಜನ್ಮ ದಿನಾಂಕವನ್ನು ಸಂಬಂಧಿಸಿದ ಶಾಲಾ ದಾಖಲಾತಿಗಳಲ್ಲಿ 18-06-1977ರ ಬದಲು 20-12-1977 ಎಂಬುದಾಗಿ ತಿದ್ದುಪಡಿ ಮಾಡಿರುತ್ತದೆ.

ಮೇಲೆ ಓದಲಾದ ಕ್ರ.ಸಂ.(2)ರಲ್ಲಿ ವಿಭಾಗೀಯ ಕಾರ್ಯದರ್ಶಿಗಳು ಹಾಗೂ ಪದನಿಮಿತ್ತ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರು ತಮ್ಮ ದಿನಾಂಕ : 25-07-2009ರ ಪತ್ರದಲ್ಲಿ ಶ್ರೀಮತಿ ಪ್ರಜ್ಞಾ ಅಮ್ಮೆಂಬಳ ಇವರ ಜನ್ಮ ದಿನಾಂಕ : 18-06-1977 ಎಂಬುದರ ಬದಲು 20-12-1977 ಎಂದು ಎಸ್.ಎಸ್.ಎಲ್.ಸಿ. ಮೂಲ ಅಂಕಪಟ್ಟಿಯಲ್ಲಿ ನಮೂದಿಸಿ ಸ್ಥಿರೀಕರಿಸಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಶ್ರೀಮತಿ ಪ್ರಜ್ಞಾ ಅಮ್ಮೆಂಬಳ, ತಹಶೀಲ್ದಾರ್ ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ, ಉಪ ನಿರ್ದೇಶಕರು, ಉಡುಪಿ ಇವರು ಸಿವಿಲ್ ನ್ಯಾಯಾಲಯದ ಆದೇಶದಂತೆ, ತಮ್ಮ ಜನ್ಮ ದಿನಾಂಕವನ್ನು ಸಂಬಂಧಿಸಿದ ಶಾಲಾ ದಾಖಲಾತಿಗಳಲ್ಲಿ 18-06-1977ರ ಬದಲು 20-12-1977 ಎಂಬುದಾಗಿ ತಿದ್ದುಪಡಿ ಮಾಡಿರುತ್ತಾರೆ ಹಾಗೂ ವಿಭಾಗೀಯ ಕಾರ್ಯದರ್ಶಿಗಳು ಹಾಗೂ ಪದನಿಮಿತ್ತ ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರು ಎಸ್.ಎಸ್.ಎಲ್.ಸಿ. ಮೂಲ ಅಂಕ ಪಟ್ಟಿಯಲ್ಲಿ ಜನ್ಮ ದಿನಾಂಕ ತಿದ್ದುಪಡಿ ಮಾಡಿ, ನಮೂದಿಸಿ ಸ್ಥಿರೀಕರಿಸಿರುತ್ತಾರೆ. ಆದ್ದರಿಂದ ತಮ್ಮ ಸೇವಾ ದಾಖಲಾತಿಗಳಲ್ಲಿಯೂ ಹಿಂದೆ ನಮೂದಾಗಿದ್ದ ಜನ್ಮ ದಿನಾಂಕ : 18-06-1977ನ್ನು ತೆಗೆದು ಹಾಕಿ 20-12-1977 ಎಂಬುದಾಗಿ ನಮೂದಿಸಲು ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಮೇಲಿನ ದಾಖಲೆಗಳನ್ನು ಪರಿಶೀಲಿಸಿ, ಸದರಿ ಅಧಿಕಾರಿಯ ಜನ್ಮ ದಿನಾಂಕವನ್ನು ತಿದ್ದುಪಡಿ ಮಾಡಲು ತೀರ್ಮಾನಿಸಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ 39 ಎಎಎಸ್‌ಡಿ 2008, ಬೆಂಗಳೂರು, ದಿನಾಂಕ : 27-04-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ಪ್ರಜ್ಞಾ ಅಮ್ಮೆಂಬಳ, ತಹಶೀಲ್ದಾರ್ ಇವರ ಜನ್ಮ ದಿನಾಂಕವನ್ನು 18-06-1977 ಎಂಬುದರ ಬದಲು 20-12-1977 ಎಂದು ಅಂಗೀಕರಿಸಿ ತಿದ್ದುಪಡಿ ಮಾಡಿ ಆದೇಶಿಸಿದೆ.

ಈ ಆದೇಶವನ್ನು ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಅಭಿಪ್ರಾಯ-1)ಯ ಟಿಪ್ಪಣಿ ಸಂ : LAW 493 OPN 09, ದಿನಾಂಕ : 15-02-2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1149

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಆರ್.ಎಂ. ನಾಟೀಕರ್, ಹಿಂದಿನ ತಹಶೀಲ್ದಾರ್, ಬೀದರ್ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಕುರಿತು-ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಕಂಇ 68 ಎಡಿಇ 2004 ದಿನಾಂಕ : 21-09-2004.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 68 ಎಡಿಇ 2004 ದಿನಾಂಕ : 29-01-2005.
3. ಜಿಲ್ಲಾಧಿಕಾರಿಗಳು, ಬೀದರ್ ಇವರ ಪತ್ರ ಸಂಖ್ಯೆ:ಕಂ:ಸಿಬ್ಬಂದಿ:ಜಿಎ:ಸಿಆರ್:23/04-05 ದಿನಾಂಕ : 17-03-2005.
4. ಜಿಲ್ಲಾಧಿಕಾರಿಗಳು, ಬೀದರ್ ಇವರ ಪತ್ರ ಸಂಖ್ಯೆ: ಕಂ : ಸಿಬ್ಬಂದಿ : ಜಿಎ : 23/04-05/6321 ದಿನಾಂಕ : 01-09-2009.
5. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ : ಕಂಇ 68 ಎಡಿಇ 2004 ದಿನಾಂಕ : 03-02-2010.
6. ಶ್ರೀ ಆರ್.ಎಂ. ನಾಟೀಕರ್, ತಹಶೀಲ್ದಾರ್ ರವರ ಲಿಖಿತ ಹೇಳಿಕೆ ದಿನಾಂಕ : 26-02-2010.

**ಪ್ರಸ್ತಾವನೆ:-**

ಶ್ರೀ ಆರ್.ಎಂ. ನಾಟೀಕರ್, ಹಿಂದಿನ ತಹಶೀಲ್ದಾರ್, ಬೀದರ್ ತಾಲ್ಲೂಕು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸದರಿ ತಾಲ್ಲೂಕಿನಲ್ಲಿ ಬೀದರ್ (ಪರಿಶಿಷ್ಟ ಜಾತಿ) ಕ್ಷೇತ್ರದ ಲೋಕಸಭಾ ಉಪ ಚುನಾವಣೆಯಲ್ಲಿ ಸ್ಪರ್ಧಿಸಿದ್ದ ಅಭ್ಯರ್ಥಿಯೊಬ್ಬರಿಗೆ ಸುಳ್ಳು ಜಾತಿ ಪ್ರಮಾಣ ಪತ್ರವನ್ನು ನೀಡಿ ಕರ್ತವ್ಯ ಲೋಪ ಎಸಗಿರುವರೆಂಬ ಕಾರಣಕ್ಕಾಗಿ ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ

: (1)ರ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಸೇವೆಯಿಂದ ಅಮಾನತ್ತುಗೊಳಿಸಿ ಸರ್ಕಾರವು ಆದೇಶಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ಸರ್ಕಾರದ ಆದೇಶದಲ್ಲಿ ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಅವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಿ, ತಹಶೀಲ್ದಾರ್, ಯಲ್ಲಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇಲ್ಲಿ ಖಾಲಿ ಇರುವ ಹುದ್ದೆಗೆ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (3)ರಲ್ಲಿ ಜಿಲ್ಲಾಧಿಕಾರಿಗಳು, ಬೀದರ್ ರವರು ಶ್ರೀ ಆರ್.ಎಂ. ನಾಟೀಕರ್, ಹಿಂದಿನ ತಹಶೀಲ್ದಾರ್, ಬೀದರ್ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಕುರಿತಂತೆ, ಕರಡು ದೋಷಾರೋಪಣ ಪಟ್ಟಿಯನ್ನು (ಅನುಬಂಧ 1 ರಿಂದ 4) ದಾಖಲೆಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ದೋಷಾರೋಪಣೆ ಪಟ್ಟಿಯ ಅನುಬಂಧ 1 ರಿಂದ 4 ರಲ್ಲಿ ಜಿಲ್ಲಾಧಿಕಾರಿಗಳ ಸಹಿ ಮಾಡಿ ಕಳುಹಿಸುವಂತೆ ಮನಃ ಜಿಲ್ಲಾಧಿಕಾರಿಗಳಿಗೆ ಕಳುಹಿಸಲಾಗಿತ್ತು. ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ : (4)ರಲ್ಲಿ ಜಿಲ್ಲಾಧಿಕಾರಿಗಳು ಸಹಿಯೊಂದಿಗೆ ಸರ್ಕಾರಕ್ಕೆ ಮತ್ತೊಮ್ಮೆ ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (5)ರಲ್ಲಿ ಸರ್ಕಾರವು ಶ್ರೀ ಆರ್.ಎಂ. ನಾಟೀಕರ್, ಹಿಂದಿನ ತಹಶೀಲ್ದಾರ್, ಬೀದರ್ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಯಾದಗೀರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇವರಿಗೆ ಜಿಲ್ಲಾಧಿಕಾರಿಗಳು ಕಳುಹಿಸಿರುವ ದೋಷಾರೋಪಣೆ ಪಟ್ಟಿಯ ಅನುಬಂಧ 1 ರಿಂದ 4 ಗಳನ್ನು ಜಾರಿಗೊಳಿಸಿ, ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾ.ಸೇ (ವ.ನಿ & ಮೇ) ನಿಯಮ 1957ರ ನಿಯಮ 11ನೇ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (6)ರಲ್ಲಿ ಶ್ರೀ ಆರ್.ಎಂ. ನಾಟೀಕರ್, ತಹಶೀಲ್ದಾರ್ ರವರು ತಮ್ಮ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ದಿನಾಂಕ : 17-09-2004ರಂದು ಜಿಲ್ಲಾಧಿಕಾರಿಗಳು ತಿಳಿಸಿರುವಂತೆ, ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಬೀದರ್, ಉಪ ನಿರ್ದೇಶಕರು, ಸಾ.ಶಿ. ಇಲಾಖೆ, ಬೀದರ್ ಹಾಗೂ ಶ್ರೀ ಆರ್.ಎಂ. ನಾಟೀಕರ್, ತಹಶೀಲ್ದಾರ್, ಬೀದರ್ ಇವರುಗಳು ಜಂಟಿಯಾಗಿ ತನಿಖೆ ಮಾಡಿ ಮೂರು ಜನರ ರುಜುವಿನೊಂದಿಗೆ ದಿನಾಂಕ : 17-09-2004ರಂದು ಬೀದರ್ ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ವರದಿ ಸಲ್ಲಿಸಲಾಗಿದೆ ಎಂದು ತಿಳಿಸಿರುತ್ತಾರೆ. ಅಲ್ಲದೆ ಅನುಮತಿ ಪಡೆಯದೇ ಕೇಂದ್ರ ಸ್ಥಾನ ಬಿಟ್ಟು ಹೋಗಿದ್ದೀರಿ ಎಂಬ ಆರೋಪಕ್ಕೆ, ಅವರಿಗೆ ಬಿ.ಪಿ. ಹೆಚ್ಚಾಗಿದ್ದ ಕಾರಣ ದಿನಾಂಕ : 20-09-2004 ರಂದು ಒಂದು ದಿನ ಕೆಲಸಕ್ಕೆ ರಜೆ ಮಂಜೂರಿ ಅರ್ಜಿ ಸಲ್ಲಿಸಿದ್ದು, ಆಗಿನ ಸಹಾಯಕ ಆಯುಕ್ತರಿಂದ ಆರೋಗ್ಯದ ಬಗ್ಗೆ ಪರವಾನಿಗೆ ಪಡೆದು ಕೇಂದ್ರಸ್ಥಾನ ಬಿಟ್ಟು ಚಿಕಿತ್ಸೆಗಾಗಿ ಹೋಗಿರುವುದಾಗಿ ತಿಳಿಸುತ್ತಾ, ಅವರು ನಿಯಮ ಉಲ್ಲಂಘನೆ ಮಾಡಲಾಗಿದೆ ಎಂದು ತಿಳಿಸಿರುವ ಎಲ್ಲಾ ಆರೋಪಗಳನ್ನು ತಮ್ಮ ಲಿಖಿತ ಹೇಳಿಕೆಯಲ್ಲಿ ನಿರಾಕರಿಸಿ ಸಂಬಂಧಪಟ್ಟ ದಾಖಲೆಗಳನ್ನು ಲಗತ್ತಿಸಿ, ಆರೋಪಗಳಿಂದ ಮುಕ್ತಿಗೊಳಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ತಿಳಿದುಕೊಂಡು ನಿರ್ಣಯ ತೆಗೆದುಕೊಳ್ಳುವ ಸಲುವಾಗಿ, ಶ್ರೀ ಆರ್.ಎಂ. ನಾಟೀಕರ್, ಹಿಂದಿನ ತಹಶೀಲ್ದಾರ್, ಬೀದರ್ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಜಿಲ್ಲಾಧಿಕಾರಿ, ಬೀದರ್ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ತಹಶೀಲ್ದಾರ್, ಬೀದರ್ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿರುವ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಅದೇಶ ಸಂಖ್ಯೆ : ಕಂಇ 68 ಎಡಿಇ 2004 ಬೆಂಗಳೂರು, ದಿನಾಂಕ : 29ನೇ ಏಪ್ರಿಲ್ 2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಆರ್.ಎಂ. ನಾಟೀಕರ್, ಹಿಂದಿನ ತಹಶೀಲ್ದಾರ್, ಬೀದರ್ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಜಿಲ್ಲಾಧಿಕಾರಿ, ಬೀದರ್ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ತಹಶೀಲ್ದಾರ್, ಬೀದರ್ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1150

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು-3)

**ENERGY SECRETARIAT**

**Sub :** Allotment of 5.00 MW capacity of Grid connected Solar Photovoltaic Power Plant to M/s Apollo Renewable Energy Private Limited-reg.

**Read :**
1. Ministry of New & Renewable Energy, Government of India, New Delhi letter No. : 32/61/2007-08/PVSE dated : 24-01-2008.
2. Letters No. KRED/07/SVGCPP-AP/2009/3937 dated : 1/3-12-2009 and No. : KRED/07/SPVGCPP/2009/125 dated : 16-01-2010 received from the Managing Director, Karnataka Renewable Energy Development Limited, Bangalore.
3. Proceedings of the Allotment Committee meeting held on 6-02-2010.

**Preamble :-**

In the letter read at (1) above Ministry of New & Renewable Energy (MNRE) has issued guidelines for Demonstration Programme on Grid Interactive Solar Photovoltaic Power Generation MNRE will provide subsidy of Rs. 12/- per Kwh of power generated through Solar Photovoltaic Power Plant and which is supplied to grid with minimum of 1.00 MW generation and maximum of 5.00 MW at a place. The developer has to approach Ministry of New & Renewable Energy through KREDL after acquisition of land for the project and entering into PPA with ESCOMs.

In the letter read at (2) above, the Managing Director, Karnataka Renewable Energy Development Limited, Bangalore has recommended for allotment of 5.00 MW capacity of Grid Connected Solar Photovoltaic Power Plant to M/s Apollo Renewable Energy Private Limited at Jhanwada and Santhur villages, Bidar District.

The proposal was placed before the allotment committee meeting held on 06-02-2010 and the Committee recommended for allotment (Proceedings read at (3) above) Hence the order :-

**Government Order No. EN 611 NCE 2009, Bangalore, Dated : 28-04-2010**

Government accords approval for allotment of 5.00 MW capacity of Grid connected Solar Photovoltaic Power Plant to M/s Apollo Renewable Energy Private Limited at Jhanwada and Santhur villages, Bidar District subject to the following conditions :-

1.(a) The allottee shall execute an agreement with Government within 45 days from the date of the capacity allotment order failing which the allotment order shall become automatically lapsed. There shall be no refund of the application fee of Rs. 10,000/- per MW received by Karnataka Renewable Energy Development Limited, Bangalore.

(b) Such an agreement on Rs. 400.00 Stamp Paper shall be routed through the Managing Director, Karnataka Renewable Energy Development Limited, Bangalore who shall certify as to its correctness after due scrutiny.

(c) Before executing the agreement the project developer shall deposit in advance with Karnataka Renewable Energy Development Limited, Bangalore the detailed project report (DPR) processing fee as per Government Order.

2.(a) The project developer shall obtain all statutory clearance from the respective authorities such as Karnataka Power Transmission Corporation Limited, Karnataka State Pollution Control Board, Forest, Ecology & Environment Department etc., Thereafter, he shall prepare and submit 3 copies of Detailed Project Report to the Managing Director, Karnataka Renewable Energy Development Limited, Bangalore to enable to issue technical clearance for the project.

(b) The Deposit amount payable by the project allottee to Karnataka Renewable Energy Development Limited, Bangalore shall be adjusted towards a Detailed Project Report processing fee.

3. The allottee shall achieve financial closure within six months from the date of technical clearance for the Detailed Project Report by Karnataka Renewable Energy Development Limited, Bangalore.

4. The allottee shall take action to complete the project implementation within 12 months from the date of achieving financial closure.
5. Failure to reach any of the project milestones specified in Sl.No. 2,3 &4 in the same order would constitute sufficient grounds to result in automatic cancellation of allotment. No notice on this account will be given to the allottee.
6. The project Developer shall enter into a Wheeling and Banking Agreement with Karnataka Power Transmission Corporation Limited (KPTCL) IN CASE OF SELLING POWER TO the third party and in case of Power Purchase Agreement with KPTCL/concerned ESCOMs.
7. The allottee Company may seek full co-operation from the concerned Officers of the Government at the District and State level to ensure speedy completion of the project.
8. In the allotted site if any of the Government Project comes up, the Government Projects will have priority and the developer should not claim any compensation.
9. Government has reserved the power to cancel/modify this Order.
10. The Developer is wholly responsible for the objections raised by local people if any.
11. The land is restricted to 25 Acres to this project.

By Order and in the name of the Governor of Karnataka

**S.J. Sampath Kumar**
Under Secretary to Government
Energy Department

PR NO. 1151

**ENERGY SECRETARIAT**

**Sub :** Allotment of 2.00 MW capacity of Grid connected Solar Photovoltaic Power Plant to M/s Azure Power India Private Limited-reg.

**Read :**
1. Ministry of New & Renewable Energy, Government of India, New Delhi letter No. : 32/61/2007-08/PVSE dated : 24-01-2008.
2. Letters No. KRED/07/SPVGCPP/2009/4161 dated : 18-12-2009 received from the Managing Director, Karnataka Renewable Energy Development Limited, Bangalore.
3. Proceedings of the Allotment Committee meeting held on 6-02-2010.

**Preamble :-**

In the letter read at (1) above Ministry of New & Renewable Energy (MNRE) has issued guidelines for Demonstration Programme on Grid Interactive Solar Photovoltaic Power Generation MNRE will provide subsidy of Rs. 12/- per Kwh of power generated through Solar Photovoltaic Power Plant and which is supplied to grid with minimum of 1.00 MW generation and maximum of 5.00 MW at a place. The developer has to approach Ministry of New & Renewable Energy through KREDL after acquisition of land for the project and entering into PPA with ESCOMs.

In the letter read at (2) above, the Managing Director, Karnataka Renewable Energy Development Limited, Bangalore has recommended for allotment of 2.00 MW capacity of Grid Connected Photovoltaic Power Plant to M/s Azure Power India Private Limited at Yelesandra village, Bangarpet Taluk, Kolar District.

The proposal was placed before the allotment committee meeting held on 06-02-2010 and the Committee recommended for allotment (Proceedings read at (3) above) Hence the order :-

**Government Order No. EN 64 NCE 2010, Bangalore, Dated : 28-04-2010**

Government accords approval for allotment of 2.00 MW capacity of Grid connected Solar Photovoltaic Power Plant to M/s Azure Power India Private Limited at Yelesandra village, Bangarpet Taluk, Kolar District subject to the following conditions :-

1.(a) The allottee shall execute an agreement with Government within 45 days from the date of the capacity allotment order failing which the allotment order shall become automatically lapsed.

There shall be no refund of the application fee of Rs. 10,000/- per MW received by Karnataka Renewable Energy Development Limited, Bangalore.

(b) Such an agreement on Rs. 400.00 Stamp Paper shall be routed through the Managing Director, Karnataka Renewable Energy Development Limited, Bangalore who shall certify as to its correctness after due scrutiny.

(c) Before executing the agreement the project developer shall deposit in advance with Karnataka Renewable Energy Development Limited, Bangalore the detailed project report (DPR) processing fee as per Government Order.

2.(a) The project developer shall obtain all statutory clearance from the respective authorities such as Karnataka Power Transmission Corporation Limited, Karnataka State Pollution Control Board, Forest, Ecology & Environment Department etc., Thereafter, he shall prepare and submit 3 copies of Detailed Project Report to the Managing Director, Karnataka Renewable Energy Development Limited, Bangalore to enable to issue technical clearance for the project.

(b) The Deposit amount payable by the project allottee to Karnataka Renewable Energy Development Limited, Bangalore shall be adjusted towards a Detailed Project Report processing fee.

3. The allottee shall achieve financial closure within six months from the date of technical clearance for the Detailed Project Report by Karnataka Renewable Energy Development Limited, Bangalore.

4. The allottee shall take action to complete the project implementation within 12 months from the date of achieving financial closure.

5. Failure to reach any of the project milestones specified in Sl.No. 2,3 &4 in the same order would constitute sufficient grounds to result in automatic cancellation of allotment. No notice on this account will be given to the allottee.

6. The project Developer shall enter into a Wheeling and Banking Agreement with Karnataka Power Transmission Corporation Limited (KPTCL) IN CASE OF SELLING POWER TO the third party and in case of Power Purchase Agreement with KPTCL/concerned ESCOMs.

7. The allottee Company may seek full co-operation from the concerned Officers of the Government at the District and State level to ensure speedy completion of the project.

8. In the allotted site if any of the Government Project comes up, the Government Projects will have priority and the developer should not claim any compensation.

9. Government has reserved the power to cancel/modify this Order.

10. The Developer is wholly responsible for the objections raised by local people if any.

11. The land is restricted to 10 Acres to this project.

By Order and in the name of the Governor of Karnataka

**S.J. Sampath Kumar**
Under Secretary to Government
Energy Department

PR NO. 1152

**ಇಂಧನ ಸಚಿವಾಲಯ**

**ವಿಷಯ :** ಶ್ರೀ ಕೆ.ಸಿ. ರೆಡ್ಡಿ, ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ಇವರಿಗೆ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಮಹಾಲೇಖಪಾಲರ ಪತ್ರ ಸಂಖ್ಯೆ : ಜಿಇ/12/ಎ6/06–07/822 ದಿನಾಂಕ : 20–12–2006.
2. ಶ್ರೀ ಕೆ.ಸಿ. ರೆಡ್ಡಿ, ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ರವರ ಮನವಿ ಪತ್ರಗಳು ದಿನಾಂಕ : 08–06–2007 ಮತ್ತು 30–04–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಶ್ರೀ ಕೆ.ಸಿ.ರೆಡ್ಡಿ, ವಿದ್ಯುತ್ ಪರಿವೀಕ್ಷಕರು ಬಳ್ಳಾರಿ ಇವರು ಸರ್ಕಾರಿ ಆದೇಶ ಸಂಖ್ಯೆ : ಇಎನ್ 52 ಇಬಿಎಸ್ 2006 ದಿನಾಂಕ : 15–7–2006ರಂತೆ ಅಮಾನತ್ತಿನಲ್ಲಿರುವುದರಿಂದ ಸ್ಥಗಿತ ವೇತನ ಬಡ್ತಿ ದಿನಾಂಕವು 01–04–2006ಕ್ಕೆ ಬದಲಾಗಿ 01–11–2006 ಎಂದು ನಿಗಧಿಪಡಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಹಿರಿಯ ಲೆಕ್ಕಾಧಿಕಾರಿಗಳು ತಮ್ಮ ಪತ್ರದಲ್ಲಿ ದಿನಾಂಕ : 01-04-2006ಕ್ಕೆ ನೀಡಬೇಕಾಗಿದ್ದ ಸ್ಥಗಿತ ವೇತನ ಬಡ್ತಿ ದಿನಾಂಕವನ್ನು 01-11-2006ಕ್ಕೆ ನಿಗಧಿಗೊಳಿಸಿರುವುದಾಗಿ ತಿಳಿಸಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ಶ್ರೀ ಕೆ.ಸಿ.ರೆಡ್ಡಿ, ಇವರು ಉಪ ವಿದ್ಯುತ್ ಪರಿವೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು (ರೂ. 7400-13120) ಸರ್ಕಾರಿ ಆದೇಶ ಸಂಖ್ಯೆ : ಇಎನ್ 233 ಇಬಿಎಸ್ 2005 ದಿನಾಂಕ : 26-10-2005ರ ಆದೇಶದಲ್ಲಿ ವಿದ್ಯುತ್ ಪರಿವೀಕ್ಷಕರ ಹುದ್ದೆಗೆ ಮುಂಬಡ್ತಿ ಹೊಂದಿರುವುದರಿಂದ (ರೂ. 9580-14200) ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಎಸ್‌ಆರ್‌ಪಿ 96 ದಿನಾಂಕ : 08-05-1997 ರನ್ವಯ ತಮ್ಮ ಅಭಿಮತ ವ್ಯಕ್ತಪಡಿಸುತ್ತಾ, ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಉಪ ವಿದ್ಯುತ್ ಪರಿವೀಕ್ಷಕರ ಹುದ್ದೆಯಲ್ಲಿಯೇ ಮುಂದುವರೆಯುವುದಾಗಿ ಹಾಗೂ ಸ್ಥಗಿತ ವೇತನ ಬಡ್ತಿಯನ್ನು ದಿನಾಂಕ : 01-04-2006 ರಿಂದ ಅನ್ವಯವಾಗುವಂತೆ ನೀಡಲು ಕೋರಿರುತ್ತಾರೆ.

ಅಧಿಕಾರಿಯವರ ಕೋರಿಕೆ ಮೇರೆಗೆ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 126 ಇಬಿಎಸ್ 2007, ಬೆಂಗಳೂರು, ದಿನಾಂಕ : 29-04-2010**

ಶ್ರೀ ಕೆ.ಸಿ.ರೆಡ್ಡಿ, ವಿದ್ಯುತ್ ಪರಿವೀಕ್ಷಕರ ಹುದ್ದೆಗೆ ದಿನಾಂಕ : 20-10-2005 ರಿಂದ ಪದೋನ್ನತಿ ಪಡೆದ 3 ತಿಂಗಳೊಳಗೆ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಎಸ್‌ಆರ್‌ಪಿ 1996 ದಿನಾಂಕ : 08-05-1997 ರನ್ವಯ ಅಭಿಮತ ಸಲ್ಲಿಸಿದ್ದು, ಉಪ ವಿದ್ಯುತ್ ಪರಿವೀಕ್ಷಕರ ಹುದ್ದೆಯ ವೇತನ ಶ್ರೇಣಿ ರೂ. 6300-11840 ರಲ್ಲಿ ದಿನಾಂಕ : 01-04-2006 ರಿಂದ ಲಭ್ಯವಾಗುವ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಅದೇಶಿಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ : 02-09-2006 ರಲ್ಲಿ ಸರ್ಕಾರದ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1153

**ಸುಜಾತಮ್ಮ**
ಪೀಠಾಧಿಕಾರಿ
ಇಂಧನ ಇಲಾಖೆ

**ENERGY SECRETARIAT**

**No. EN 67 PSR 2009 Bangalore, Dated : 26-04-2010**

**ADDENDUM**

In the Government Order No. EN 67 PSR 2009 dated 01-03-2010, after para-2 of the order portion, the following shall be included as para-3.

"The Principal Accountant General (A&E) is requested to carryout the book adjustments in the books of State for the year 2009-10 by debit to *4801-01-190-0-09-211* – Investment in power utility per contra credit to 6801-00-800-1-01-294".

Consequent to the above, the existing para-3 of the order portion in G.O. No. EN 67 PSR 2009 dated 01-03-2010 shall be read as para-4.

By Order and in the name of the Governor of Karnataka

PR NO. 1154

**S.J. Sampath Kumar**
Under Secretary to Government
Energy Department

**ಜಲ ಸಂಪನ್ಮೂಲ ಸಚಿವಾಲಯ**

**ಸಂಖ್ಯೆ : ಸನೀಇ 7 ಕೆಜಿದು 2010, ಬೆಂಗಳೂರು, ದಿನಾಂಕ : 03–05–2010**

**ತಿದ್ದುಪಡಿ ಆದೇಶ**

ದಿನಾಂಕ : 12–04–2010ರಂದು ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ : ಸನೀಇ 7 ಕೆಜಿದು 2010ರ ಆದೇಶದಲ್ಲಿನ ಕ್ರಮ ಸಂಖ್ಯೆ : 9ರಲ್ಲಿನ **"ಕಗ್ಗೋಡ"** ಎಂಬುದರ ಬದಲು **"ನಾಗವಾಡ"** ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1155

**ಕೆ.ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ENERGY SECRETARIAT**

**Sub :** Change of location from Gulbarga District to Belgaum District for 10.00 M.W. grid connected solar photovoltaic power plant in favour M/s Astonfield Solar (Karnataka) Pvt. Ltd.-reg.

**Read :** 1. Government Order No : EN 243 NCE 2008, dated : 8-12-2008.
2. Letter No. KRED/07/SPV GCOPP/2009/4164 dated : 17/18.12.2009 received from the Managing Director, Karnataka Renewable Energy Development Limited, Bangalore.
3. Proceedings of the Allotment Committee meeting held on 6-02-2010.

**Preamble:**

In the Government Order read at (1) above, approval has been accorded to M/s Astonfield Renewable Resources Limited for implementation of 10.00 MW grid connected solar photovoltaic power plant at Gulbarga District.

In the letter read at (2) above, the Managing Director, Karnataka Renewable Energy Development Limited, Bangalore has recommended for Change location from Gulbarga District to Belgaum District for 10.00 MW grid connected solar photovoltaic power plant in favour of M/s Astonfield Solar (Karnataka) Pvt Ltd.

The proposal was placed before the allotment committee meeting held on 6-02-2010 and the Committee accorded approval for change of location from Gulbarga District to Belgaum District. Hence the Order :-

**GOVERNMENT ORDER NO. EN 243 NCE 2008, BANGALORE, DATED 28-04-2010**

Government accords approval for Change of location mentioned in the Government Order No. EN 243 NCE 2008 dated : 8-12-2008 from Gulbarga District to Belgaum District for 10.00 MW grid connected solar photovoltaic power plant in favour of M/s Astonfield Solar (Karnataka) Pvt. Ltd.

The other terms and conditions specified in the Government Order No. EN 243 NCE 2008 dated 8-12-2008 shall continue as it is.

By Order and in the name of the Governor of Karnataka,

**(S.J. SAMPATH KUMAR)**
Under Secretary to Government,
Energy Department.

P.R.No. 1156

**ENERGY SECRETARIAT**

**Sub :** Change of company's name from M/s Astonfield Renewable Resources Private Limited, Kolkata to M/s Astonfield Solar (Karnataka) Private Limited, Mumbai-reg.

**Read :** 1. Government Order No : EN 243 NCE 2008, dated : 8-12-2008.
2. Letter No. KRED/07/SPV GCPP/2009-10/949 dated : 08-04-2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, approval has been accorded for implementation of 10.00 MW grid connected solar photovoltaic power plant at Gulbarga District to M/s Astonfield Renewable Resources Limited, Kolkata.

The Registrar of Companies, Maharashtra, Mumbai has issued a certificate of incorporation for M/s Astonfield Solar (Karnataka) Private Limited the vide CIN No. U40108MH2009 PTC 190750 dated : 5-03-2009.

In the letter read at (2) above, the Managing Director, Karnataka Renewable Energy Development Limited, Bangalore has sent a proposal to Government for transfer of 10.00 MW capacity of grid connected solar photovoltaic power plant from M/s Astonfield Renewable Resources Limited, Kolkata to M/s Astonfield Solar (Karnataka) Private Limited, Mumbai.

The proposal has been examined in detail and issued the following Order :-

**GOVERNMENT ORDER NO. EN 70 NCE 2010, BANGALORE, DATED 28-04-2010**

Government accords approval for Change of company's name from M/s Astonfield Renewable Resources Private Limited, Kolkata to M/s Astonfield Solar (Karnataka) Private Limited, Mumbai.

The Government has reserved the power to Cancel/modify this Order.

The other terms and conditions of the Government Order No : EN 243 NCE 2008 dated : 08-12-2008 shall IPSO FACTO applicable.

By Order and in the name of the Governor of Karnataka,

**(S.J. SAMPATH KUMAR)**
Under Secretary to Government,
Energy Department.

P.R.No. 1157

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿ) ಹಿಂದಿನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು ರವರ ವಿರುದ್ಧ ಇಲಾಖಾ ವಿಚಾರಣೆ – ದೋಷಾರೋಪಣೆ ಪಟ್ಟಿಯಿಂದ ಸಾಕ್ಷಿಯನ್ನು ಕೈ ಬಿಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂ : ಸಿಆಸುಇ 138 ಎಸ್‌ಇಎನ್ 2007, ದಿ : 29–08–2007.
2) ಸರ್ಕಾರಿ ಆದೇಶ ಸಂ : ಸಿಆಸುಇ 291 ಕೆಇವಿ 2007, ದಿ : 18–12–2007.
3) ಸರ್ಕಾರಿ ಆದೇಶ ಸಂ : ಸಿಆಸುಇ 291 ಕೆಇವಿ 2007, ದಿ : 02–01–2009.
4) ವಿಚಾರಣಾಧಿಕಾರಿ ರವರ ಅ.ಟಿ. ಸಂ : ಗ್ರಾಅಪ 45 ಗ್ರಾನೀಸ (4) 09, ದಿ: 30.11.09.

**ಪ್ರಸ್ತಾವನೆ :**

ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿ) ರವರು ತುಮಕೂರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ 2006–07 ನೇ ಸಾಲಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸಾರ್ವಜನಿಕ ಕುಡಿಯುವ ನೀರಿನ ಯೋಜನೆಯಡಿ ಹಣ ದುರುಪಯೋಗ ಮಾಡಿರುವುದು ಮತ್ತು ಯೋಜನೆಯ ಬಾಬ್ತಿನಲ್ಲಿ ಚಾಲ್ತಿಯಲ್ಲಿರುವ ಮಾರ್ಗದರ್ಶನವನ್ನು ಉಲ್ಲಂಘನೆ ಮಾಡಿರುವ ಇತ್ಯಾದಿ 05 ಆರೋಪಗಳ ಕುರಿತು ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿರ್ದೇಶಕರು, (ಎಸ್‌ಇಪಿ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ನಂತರ ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಸಿ.ಎಂ. ಶಿರೋಳ್, ಭಾ.ಅ.ಸೇ. ನಿರ್ದೇಶಕರು, ಸುವರ್ಣ ಗ್ರಾಮೋದ್ಯೋಗ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಶ್ರೀ ಸಿ.ಎಂ. ಶಿರೋಳ್, ಭಾ.ಅ.ಸೇ. ರವರು ಬಿಜಾಪುರ ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿ ವರ್ಗಾವಣೆಗೊಂಡಿರುವ ಪ್ರಯುಕ್ತ ಹಾಗೂ ಒಂದು ವರ್ಷ ಕಳೆಯುತ್ತಿದ್ದರೂ ಈ ಪ್ರಕರಣದ ವಿಚಾರಣೆಯಲ್ಲಿ ಯಾವುದೇ ಪ್ರಗತಿ ಕಂಡು ಬರುತ್ತಿಲ್ಲವಾದ್ದರಿಂದ ಇವರ ಬದಲಿಗೆ ಬೇರೆ ವಿಚಾರಣಾಧಿಕಾರಿಗಳನ್ನು ನೇಮಿಸಲು ನಿರ್ಣಯಿಸಿ ಮೇಲೆ ಕ್ರಮಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನಿರ್ದೇಶಕರು, ಗ್ರಾಮೀಣ ಮೂಲಭೂತ ಸೌಲಭ್ಯಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಗಳಾಗಿ ನೇಮಕ ಮಾಡಲಾಗಿತ್ತು. ಹೀಗೆ ವಿಚಾರಣಾಧಿಕಾರಿಗಳಾಗಿ ನೇಮಕಗೊಂಡಿರುವ ನಿರ್ದೇಶಕರು, ಗ್ರಾಮೀಣ ಮೂಲಭೂತ ಸೌಲಭ್ಯಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ರವರು ಮೇಲೆ ಕ್ರಮಸಂಖ್ಯೆ (4) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಪ್ರಕರಣದಲ್ಲಿ ತಮ್ಮನ್ನು ಸಾಕ್ಷಿಯೆಂದು ಆರೋಪಣಾ ಪಟ್ಟಿಯಲ್ಲಿ ಹೆಸರಿಸಿದ್ದು, ವಸ್ತು ಸ್ಥಿತಿ

ಹೀಗಿರುವಾಗ ತಾವು ವಿಚಾರಣೆ ಮುಂದುವರೆಸುವ/ನಡೆಸುವ ಕುರಿತು ಆದೇಶ ನೀಡುವಂತೆ ಕೋರಿರುತ್ತಾರೆ. ಅದರಂತೆ ವಿಚಾರಣಾಧಿಕಾರಿಗಳ ಕೋರಿಕೆಯನ್ನು ಪರಿಗಣಿಸಿ ದೋಷಾರೋಪಣೆ ಪಟ್ಟಿಯ ಅನುಬಂಧ-4 ರಲ್ಲಿನ ಸಾಕ್ಷಿಗಳ ಪಟ್ಟಿಯಲ್ಲಿ ಹಿಂದಿನ ನಿರ್ದೇಶಕರು (ಗ್ರಾಮೂಸೌ) ರವರನ್ನು ಕೈಬಿಟ್ಟು ಹಾಲಿ ಇರುವ ನಿರ್ದೇಶಕರು (ಗ್ರಾಮೂಸೌ) ಇವರಿಂದ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಸಿಅಸುಇ 291 ಕೆಇವಿ 2007, ಬೆಂಗಳೂರು, ದಿನಾಂಕ : 12-04-2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ (ನಿ) ಅಧಿಕಾರಿ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ನಡೆಸಲು ದಿ: 12-06-07 ರ ನೋಟೀಸಿನೊಂದಿಗೆ ಜಾರಿ ಮಾಡಲಾದ ದೋಷಾರೋಪಣೆ ಪಟ್ಟಿಯ ಅನುಬಂಧ-4 ರಲ್ಲಿ ಸಾಕ್ಷಿಗಳ ಪಟ್ಟಿಯಲ್ಲಿ ನಿರ್ದೇಶಕರು (ಗ್ರಾಮೂಸೌ) ರವರನ್ನು ಸಾಕ್ಷಿಯಿಂದ ಕೈ ಬಿಡಲಾಗಿದೆ. ಮುಂದುವರೆದು ಹಾಲಿ ಇರುವ ನಿರ್ದೇಶಕರು (ಗ್ರಾಮೂಸೌ) ರವರು ವಿಚಾರಣೆಯನ್ನು ಮುಂದುವರೆಸಿ ಶೀಘ್ರವಾಗಿ ವರದಿಯನ್ನು ಸಲ್ಲಿಸತಕ್ಕದ್ದು.

ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್ ತುಮಕೂರು ಇವರೇ ಈ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ಮುಂದುವರೆಯಲಿದ್ದಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಚ್.ಆರ್. ನಾಗೇಂದ್ರ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ. (ಸೇವೆಗಳು-2).

ಪಿ.ಆರ್. 1158

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್, ಅವರ ವಿರುದ್ಧ ಇಲಾಖೆ ವಿಚಾರಣೆ – ಮಂಡನಾಧಿಕಾರಿ ನೇಮಕ ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 51 ಎಸ್ಇಎನ್ 05, ದಿನಾಂಕ 08.06.2007.
**2)** ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 51 ಎಸ್ಇಎನ್ 05, ದಿನಾಂಕ 22.09.2008.
**3)** ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 51 ಎಸ್ಇಎನ್ 05, ದಿನಾಂಕ 27.02.2009.
**4)** ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 51 ಎಸ್ಇಎನ್ 2005. ದಿನಾಂಕ 06.07.2009.
**5)** ಶ್ರೀ ಆರ್. ರಂಗನಾಥ್, ಕಾರ್ಯಪಾಲಕ ಇಂಜಿನಿಯರ್, ಇವರ ಮನವಿ ದಿನಾಂಕ : 16.04.2010.

**ಪ್ರಸ್ತಾವನೆ :**

ಶ್ರೀ ಬಿ.ಸಿ. ಮುಧೋಳ್, ನಿವೃತ್ತ ಮುಖ್ಯ ಇಂಜಿನಿಯರ್, ಅವರು ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಪ್ರಾಧಿಕಾರದ ವ್ಯಾಪ್ತಿಯಲ್ಲಿ 300 ಕಾಮಗಾರಿಗಳ ಅಂದಾಜು ಪಟ್ಟಿಯನ್ನು ಸಿದ್ಧಪಡಿಸದೇ ತಮಗೆ ಬೇಕಾದ ಕಂಟ್ರಾಕ್ಟರುಗಳಿಗೆ ಗುತ್ತಿಗೆ ನೀಡಿ, ಅವುಗಳು ಪೂರ್ಣಗೊಳ್ಳದೆ ಅರ್ಧಕ್ಕೆ ನಿಂತಿದ್ದರೂ ಸಹ ಅವುಗಳ ಗುಣಮಟ್ಟ ಅರಿಯದೇ ಪೂರ್ಣ ಹಣವನ್ನು ಪಾವತಿ ಮಾಡಿದ್ದು, ಆಲಮ್ ಕೂರಿನ್ ಮತ್ತು ಪ್ರಾಧಿಕಾರಕ್ಕೆ ಅವಶ್ಯಕತೆಗಿಂತ ಹೆಚ್ಚಾಗಿ ವಾಟರ್ ಮೀಟರ್ ಖರೀದಿಯಲ್ಲಿ ಅವ್ಯವಹಾರ ಎಸಗಿ ಪಾರದರ್ಶಕತೆ ಕಾಯಿದೆಗಳನ್ನು ಪಾಲಿಸದೆ ಸರ್ಕಾರದ ಹಣವನ್ನು ದುರುಪಯೋಗಪಡಿಸಿರುವ ಆರೋಪಿಗಳಿಗಾಗಿ ಶ್ರೀ ಬಿ.ಸಿ. ಮುಧೋಳ್ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎ ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಮೇಲೆ (1) ರಲ್ಲಿ ಓದಲಾದ ದಿನಾಂಕ : 08-06-2007ರ ಸರ್ಕಾರದ ಆದೇಶದಲ್ಲಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ಮತ್ತು ಶ್ರೀಮತಿ ಹೇಮಲತಾ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಉಡುಪಿ ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ಶ್ರೀಮತಿ ಹೇಮಲತಾ ಇವರು ಮನವಿ ಸಲ್ಲಿಸಿ, ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತಿಲ್ಲವಾದ ಕಾರಣ ಈ ಪ್ರಕರಣದ ಮಂಡನಾಧಿಕಾರಿ ಜವಾಬ್ದಾರಿಯಿಂದ ಬಿಡುಗಡೆಗೊಳಿಸುವಂತೆ ಕೋರಿದ ಹಿನ್ನೆಲೆಯಲ್ಲಿ ದಿನಾಂಕ 22-09-2008 ರಂದು ಶ್ರೀ ಪಾಲಯ್ಯ, ನಿಬಂಧಕರು, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಆನಂದರಾವ್ ವೃತ್ತ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ನಂತರ ಕ್ರಮ ಸಂಖ್ಯೆ (3)

ರಲ್ಲಿ ಓದಲಾದ ಆದೇಶದಲ್ಲಿ ಮಂಡನಾಧಿಕಾರಿಯಾಗಿ ನೇಮಕವಾಗಿದ್ದ ಶ್ರೀ ಪಾಲಯ್ಯ ಇವರ ಬದಲಿಗೆ ಶ್ರೀ ಕೆ.ಆರ್. ಶ್ರೀನಿವಾಸ ರಂಗನ್, ಕಾರ್ಯಪಾಲಕ ಇಂಜಿನಿಯರ್, ಕೃಷ್ಣ-ಗೋದಾವರಿ ಘಟಕ ಮತ್ತು ಅಂತರ್ ರಾಜ್ಯ ಜಲ, ಜಲಸಂಪನ್ಮೂಲ ಸಂಸ್ಥೆ, ಬೆಂಗಳೂರು ಇವರನ್ನು ನೇಮಕ ಮಾಡಲಾಗಿತ್ತು. ಕ್ರಮ ಸಂಖ್ಯೆ (4) ರಲ್ಲಿ ಮುಖ್ಯ ಇಂಜಿನಿಯರ್ (ಅಂತರ್ ರಾಜ್ಯ), ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರು ಮನವಿ ಸಲ್ಲಿಸಿ ಶ್ರೀ ಕೆ.ಆರ್. ಶ್ರೀನಿವಾಸ ರಂಗನ್, ಕಾರ್ಯಪಾಲಕ ಇಂಜಿನಿಯರ್, ಇವರಿಗೆ ಕಾರ್ಯದ ಒತ್ತಡ ಹಾಗೂ ಕೃಷ್ಣ ನ್ಯಾಯಾಧೀಕರಣ ಕಲಾಪಗಳು ತ್ವರಿತ ಗತಿಯಲ್ಲಿ ನಡೆಯುತ್ತಿರುವುದರಿಂದ ಇವರ ಬದಲು ಶ್ರೀ ಆರ್. ರಂಗನಾಥ, ಕಾರ್ಯಪಾಲಕ ಇಂಜಿನಿಯರ್, ಕಾವೇರಿ ಜಲ ವಿವಾದ ಘಟಕ, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲು ಕೋರಿದ್ದರು. ಮೇಲೆ ಓದಲಾದ (5)ರ ಪತ್ರದಲ್ಲಿ ಶ್ರೀ ಆರ್. ರಂಗನಾಥ, ಕಾರ್ಯಪಾಲಕ ಇಂಜಿನಿಯರ್ ಇವರು, ತಾವು ವರ್ಗಾವಣೆಯಾಗಿ ಕಡ್ಡಾಯ ನಿರೀಕ್ಷಣಾ ಅವಧಿಯಲ್ಲಿರುವುದಾಗಿ ತಿಳಿಸಿರುವುದರಿಂದ ಅವರ ಬದಲಿಗೆ ಆ ಸ್ಥಾನದಲ್ಲಿ ವರ್ಗಾವಣೆಗೊಂಡ ಶ್ರೀ ಪಿ. ರಾಮಕುಮಾರ್, ಕಾರ್ಯಪಾಲಕ ಇಂಜಿನಿಯರ್ ಅವರನ್ನು ಮಂಡನಾಧಿಕಾರಿಯಾಗಿ ನೇಮಿಸುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂ : ಸಿಅಸುಇ 51 ಎಸ್‌ಇಎನ್ 2005, ಬೆಂಗಳೂರು, ದಿನಾಂಕ : 30-04-2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 51 ಎಸ್‌ಇಎನ್ 2005, ದಿನಾಂಕ 06-07-2009 ನ್ನು ಮಾರ್ಪಡಿಸಿ, ಶ್ರೀ ಆರ್. ರಂಗನಾಥ, ಕಾರ್ಯಪಾಲಕ ಇಂಜಿನಿಯರ್, ಇವರ ಸ್ಥಾನದಲ್ಲಿ ಶ್ರೀ ಪಿ. ರಾಮಕುಮಾರ್, ಕಾರ್ಯಪಾಲಕ ಇಂಜಿನಿಯರ್, ಕಾವೇರಿ ಜಲ ವಿವಾದ ಘಟಕ, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರನ್ನು ಈ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(5)(ಸಿ) ಅನ್ವಯ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಎಸ್. ಶಿವರಾಮ್),**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

ಪಿ.ಆರ್. 1159 (ಸೇವೆಗಳು-3).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಶ್ರೀಮತಿ ಸಿ.ವಿ. ಮಂಜುಳ, ಭಾಷಾಂತರಕಾರರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಸ್ವಯಂಚಾಲಿತ ವಿಶೇಷ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** :

1) ಆದೇಶ ಸಂಖ್ಯೆ : ಸಿಆಸುಇ 124 ಸೇಲೋಯು 2004, ದಿನಾಂಕ 21.02.2005.

**2)** ಕರ್ನಾಟಕ ಲೋಕಾಯುಕ್ತದ ನಿಬಂಧಕರ ದಿನಾಂಕ 20.10.2009ರ ಪತ್ರ ಸಂಖ್ಯೆ : ಲೋಕ/ಸಿಬ್ಬಂದಿ (1)/03/2009-10.

**ಪ್ರಸ್ತಾವನೆ :**

ಶ್ರೀಮತಿ ಸಿ.ವಿ. ಮಂಜುಳ, ಭಾಷಾಂತರಕಾರರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಒಂದೇ ಹುದ್ದೆಯಲ್ಲಿ ಮುಂಬಡ್ತಿ ಇಲ್ಲದೇ ದಿನಾಂಕ 16-08-2009 ಕ್ಕೆ 15 ವರ್ಷಗಳ ಸತತ ಸೇವೆಯನ್ನು ಪೂರ್ಣಗೊಳಿಸಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳು 1991 ರನ್ವಯ ಭಾಷಾಂತರಕಾರರ ಹುದ್ದೆಗೆ ನಿಗದಿಪಡಿಸಿರುವ ಹಿರಿಯ ವೇತನ ಶ್ರೇಣಿ 12000-22650 ನ್ನು ಮಂಜೂರು ಮಾಡಲು ಮೇಲೆ (1) ರಲ್ಲಿ ಓದಲಾಗಿರುವ ದಿನಾಂಕ 20-10-2009ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತದ ನಿಬಂಧಕರು ಶಿಫಾರಸು ಮಾಡಿರುವರು. ಲೋಕಾಯುಕ್ತ ಸಂಸ್ಥೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಭಾಷಾಂತರಕಾರರ ಹುದ್ದೆಯಿಂದ ಮುಂಬಡ್ತಿ ನೀಡುವ ಆಸ್ಪದವನ್ನು ಕಲ್ಪಿಸಿರುವುದಿಲ್ಲ. ಶ್ರೀಮತಿ ಸಿ.ವಿ. ಮಂಜುಳರವರಿಗೆ ಮೇಲೆ (1) ರಲ್ಲಿ ಓದಲಾದ ಆದೇಶದ ಮೂಲಕ 10 ವರ್ಷಗಳ ಸೇವೆ ಸಲ್ಲಿಸಿರುವುದಕ್ಕೆ ಕಾಲಬದ್ಧ ಮುಂಬಡ್ತಿಯನ್ನು ಮಂಜೂರು ಮಾಡಲಾಗಿದೆ. ನಿಬಂಧಕರು, ಲೋಕಾಯುಕ್ತ ಇವರು ಶಿಫಾರಸ್ಸು ಮಾಡಿರುವಂತೆ ಈ ಅಧಿಕಾರಿಗೆ ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ ನೀಡಬೇಕಾಗಿರುತ್ತದೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ : ಸಿಆಸುಇ 200 ಸೇಲೋಯು 2009, ಬೆಂಗಳೂರು, ದಿನಾಂಕ : 29-04-2010**

ಶ್ರೀಮತಿ ಸಿ.ವಿ. ಮಂಜುಳ, ಭಾಷಾಂತರಕಾರರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳು 1991 ರನ್ವಯ ಭಾಷಾಂತರಕಾರರ ಹುದ್ದೆಯಲ್ಲಿ ಸ್ವಯಂಚಾಲಿತ ವಿಶೇಷ ಬಡ್ತಿಯನ್ನು ಹಿರಿಯ ವೇತನ ಶ್ರೇಣಿ ರೂ. 12,000-300-12,300-350-14,400-400-16,800-450-19,500-525-22650 ರಲ್ಲಿ ದಿನಾಂಕ : 17-08-2009 ರಿಂದ ಜಾರಿಗೆ ಬರುವಂತೆ ಸ್ವಯಂಚಾಲಿತ ವಿಶೇಷ ಮುಂಬಡ್ತಿಯನ್ನು ಮಂಜೂರು ಮಾಡಲಾಗಿದೆ. ಇವರ ವೇತನವನ್ನು ಕಾಲಾನುಕ್ರಮವಾಗಿ ಮರುನಿಗದಿಪಡಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಪಿ. ಮಾರ್ಕಂಡೇಯ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

ಪಿ.ಆರ್. 1160 (ಸೇವಾ ನಿಯಮಗಳು-2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶವನ್ನು ಹಾಗೂ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 14 ಸಸಿವಿ 1994, ದಿನಾಂಕ 07.07.1994.

2) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 34 ಸಸಿವಿ 1999, ದಿನಾಂಕ 22.10.1999.

3) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 09 ಸಸಿವಿ 2007, ದಿನಾಂಕ 02.03.2007.

4) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 233 ಸ.ಅ.ಸೇ. 2009, ದಿನಾಂಕ 15.05.2009.

5) ಜಲಸಂಪನ್ಮೂಲ ಇಲಾಖೆ ಕಡತ ಸಂಖ್ಯೆ : ಜಸಂಇ 50 ಕೆಬಿಎನ್ 10.

**ಪ್ರಸ್ತಾವನೆ :**

ಮೇಲೆ ಓದಲಾದ (1) ಮತ್ತು (2)ರ ಸರ್ಕಾರದ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ಪ್ರಾರಂಭಿಕ ಕಾರ್ಯಗಳನ್ನು ನಿರ್ವಹಿಸಲು ಈ ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಸೃಜಿಸಲಾಗಿದೆ. ಈ ತಾತ್ಕಾಲಿಕ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗಿದ್ದು. ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ವಿಶೇಷ ಕೋಶದೊಂದಿಗೆ ಸದರಿ ಹುದ್ದೆಗಳನ್ನು ದಿನಾಂಕ 01-04-2009 ರಿಂದ 31-03-2010 ರವರೆಗೆ ಮುಂದುವರಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಕಡತದಲ್ಲಿ ಜಲಸಂಪನ್ಮೂಲ ಇಲಾಖೆಯ ವಿಶೇಷ ಕೋಶ ಹಾಗೂ ಪೂರಕ ಹುದ್ದೆಗಳ ಅಗತ್ಯವಿರುವುದರಿಂದ ವಿಶೇಷ ಕೋಶ ಹಾಗೂ ಹುದ್ದೆಗಳನ್ನು ಮುಂದುವರಿಸುವಂತೆ ಪ್ರಸ್ತಾವಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 1 ಹುದ್ದೆ |
| 2. | ವಿಶೇಷ ಕರ್ತವ್ಯಾಧಿಕಾರಿ (ಅಧೀನ ಕಾರ್ಯದರ್ಶಿ ಕೇಡರ್) | 1 ಹುದ್ದೆ |
| 3. | ಶಾಖಾಧಿಕಾರಿ | 1 ಹುದ್ದೆ |
| 4. | ಹಿರಿಯ ಸಹಾಯಕ | 2 ಹುದ್ದೆ |
| 5. | ಸಹಾಯಕ | 1 ಹುದ್ದೆ |
| 6. | ಶೀಘ್ರಲಿಪಿಗಾರರು | 1 ಹುದ್ದೆ |
| 7. | ಬೆರಳಚ್ಚುಗಾರರು | 1 ಹುದ್ದೆ |
| 8. | ದಲಾಯತ್ | 1 ಹುದ್ದೆ |

| ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ ಆಪ್ತ ಶಾಖೆ ಸಿಬ್ಬಂದಿ :- | | |
|---|---|---|
| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
| 1. | ಶೀಘ್ರಲಿಪಿಗಾರರು | 1 ಹುದ್ದೆ |
| 2. | ಕಿರಿಯ ಸಹಾಯಕರು | 1 ಹುದ್ದೆ |
| 3. | ಗ್ರೂಪ್ – ಡಿ | 1 ಹುದ್ದೆ |

ಈ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂ : ಸಿಆಸುಇ 197 ಸಅಸೇ 2009, ಬೆಂಗಳೂರು, ದಿನಾಂಕ : 22-04-2010**

ಕರ್ನಾಟಕ ಸರ್ಕಾರದ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಹಾಗೂ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳೊಂದಿಗೆ ದಿನಾಂಕ 01-04-2010 ರಿಂದ ದಿನಾಂಕ 31-03-2011 ರವರೆಗೆ ಮುಂದುವರೆಸಿ ಆದೇಶಿಸಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 1 ಹುದ್ದೆ |
| 2. | ವಿಶೇಷ ಕರ್ತವ್ಯಾಧಿಕಾರಿ (ಅಧೀನ ಕಾರ್ಯದರ್ಶಿ ಕೇಡರ್) | 1 ಹುದ್ದೆ |
| 3. | ಶಾಖಾಧಿಕಾರಿ | 1 ಹುದ್ದೆ |
| 4. | ಹಿರಿಯ ಸಹಾಯಕ | 2 ಹುದ್ದೆ |
| 5. | ಸಹಾಯಕ | 1 ಹುದ್ದೆ |
| 6. | ಶೀಘ್ರಲಿಪಿಗಾರರು | 1 ಹುದ್ದೆ |
| 7. | ಬೆರಳಚ್ಚುಗಾರರು | 1 ಹುದ್ದೆ |
| 8. | ದಲಾಯತ್ | 1 ಹುದ್ದೆ |
| | **ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ ಆಪ್ತ ಶಾಖೆ ಸಿಬ್ಬಂದಿ :-** | |
| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
| 1. | ಶೀಘ್ರಲಿಪಿಗಾರರು | 1 ಹುದ್ದೆ |
| 2. | ಕಿರಿಯ ಸಹಾಯಕರು | 1 ಹುದ್ದೆ |
| 3. | ಗ್ರೂಪ್ – ಡಿ | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್.ಡಿ. 1 ಟಿಎಫ್‌ಪಿ 96, ದಿನಾಂಕ 10-07-1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ.ಎಸ್. ಶಿವರಾಮ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವೆಗಳು-3).

ಪಿ.ಆರ್. 1161

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**
**ತಿದ್ದೋಲೆ**
**ಸಂಖ್ಯೆ : ಸಿಆಸುಇ 136 ಸಅಸೇ 2010, ಬೆಂಗಳುರು, ದಿನಾಂಕ 29–04–2010**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ಮುಂದುವರೆಸಿ ಹೊರಡಿಸಲಾದ ದಿನಾಂಕ 07–04–2010 ರ ಸರ್ಕಾರ ಆದೇಶ ಸಂಖ್ಯೆಯನ್ನು **ಸಿಆಸುಇ 276 ಸಅಸೇ 2009** ಎಂಬುದಕ್ಕೆ ಬದಲಾಗಿ **ಸಿಆಸುಇ 136 ಸಅಸೇ 2010** ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ.ಎಸ್. ಶಿವರಾಮ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
ಪಿ.ಆರ್. 1162 (ಸೇವೆಗಳು–3).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿನ ಉಪಕಾರ್ಯದರ್ಶಿ (ಎಫ್.ಆರ್. ಮತ್ತು ಬಿ.ಸಿ.ಸಿ.) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 95 ಸಅಸೇ 2010 ದಿನಾಂಕ 24.02.2010.
2) ಪತ್ರ ಸಂಖ್ಯೆ ಎಫ್‌ಡಿ 41 ಸಮಯ 2010, ದಿನಾಂಕ 9–4–2010 ಸರ್ಕಾರದ ಕಾರ್ಯದರ್ಶಿ (ಆಯವ್ಯಯ ಮತ್ತು ಸಂಪನ್ಮೂಲಗಳು), ಆರ್ಥಿಕ ಇಲಾಖೆ ಇವರಿಂದ.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ 24ನೇ ಫೆಬ್ರವರಿ 2010 ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಅಧೀನ ಕಾರ್ಯದರ್ಶಿ (ಎಫ್.ಆರ್. ಮತ್ತು ಬಿ.ಸಿ.ಸಿ.) ಈ ಹುದ್ದೆಯನ್ನು ದಿನಾಂಕ 31.3.2010 ರವರೆಗೆ ತಾತ್ಕಾಲಿಕವಾಗಿ ಸರ್ಕಾರದ ಉಪ ಕಾರ್ಯದರ್ಶಿ (ಎಫ್.ಆರ್. ಮತ್ತು ಬಿ.ಸಿ.ಸಿ.) ಹುದ್ದೆಗೆ ಮೇಲ್ದರ್ಜೆಗೇರಿಸಿ ಆದೇಶ ಹೊರಡಿಸಲಾಗಿತ್ತು. ಮೇಲೆ (2) ರಲ್ಲಿ ಓದಲಾದ ದಿನಾಂಕ 9–4–2010 ರ ಪತ್ರದಲ್ಲಿ ಕಾರ್ಯದರ್ಶಿ (ಆಯವ್ಯಯ ಮತ್ತು ಸಂಪನ್ಮೂಲಗಳು), ಆರ್ಥಿಕ ಇಲಾಖೆ ಅವರು ಸದರಿ ಹುದ್ದೆಯನ್ನು ದಿನಾಂಕ 1.4.2010 ರಿಂದ ಮುಂದುವರೆಸುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಸಿಆಸುಇ 95 ಸಆಸೇ 2010, ಬೆಂಗಳೂರು, ದಿನಾಂಕ : 24–04–2010**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಉಪ ಕಾರ್ಯದರ್ಶಿ (ಎಫ್.ಆರ್. ಮತ್ತು ಬಿ.ಸಿ.ಸಿ.) ಹುದ್ದೆಯನ್ನು ದಿನಾಂಕ 1–4–2010 ರಿಂದ ಒಂದು ವರ್ಷದವರೆಗೆ ಮುಂದುವರೆಸುತ್ತದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996 ರಲ್ಲಿ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ.ಎಸ್. ಶಿವರಾಮ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
ಪಿ.ಆರ್. 1163 (ಸೇವೆಗಳು–3).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಜಲಸಂಪನ್ಮೂಲ ಇಲಾಖೆಯ ತಾಂತ್ರಿಕ–4 ಶಾಖೆಯಲ್ಲಿನ ವಿಶೇಷಾಧಿಕಾರಿ (ವಿಶ್ವಬ್ಯಾಂಕ್) ಹುದ್ದೆಯ ಹೆಸರನ್ನು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 556 ಸಅಸೇ 2009, ದಿನಾಂಕ 04.02.2010.
2) ಅನಧಿಕೃತ ಟಿಪ್ಪಣಿ ಸಂಖ್ಯೆ : ಜಸಂಇ 41 ವಿಬ್ಯಾಇ 2010, ದಿನಾಂಕ 09–04–2010.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಸರ್ಕಾರದ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯ ವಿಶ್ವಬ್ಯಾಂಕ್ ಯೋಜನೆಗಳು ಶಾಖೆಯನ್ನು ತಾಂತ್ರಿಕ–4 ಶಾಖೆ ಎಂದು ಮರುಪದನಾಮೀಕರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ರ ಅನಧಿಕೃತ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆಯ ವಿಶೇಷಾಧಿಕಾರಿ (ವಿಶ್ವಬ್ಯಾಂಕ್) ಹುದ್ದೆಯಿದ್ದು ಮತ್ತು ವಿಶ್ವಬ್ಯಾಂಕ್ ಶಾಖೆಯ

ಹೆಸರು ತಾಂತ್ರಿಕ-4 ಎಂದು ಮರುಪದನಾಮೀಕರಿಸಿರುವುದರಿಂದ, ಈಗ ಗೊಂದಲಕ್ಕೆ ಕಾರಣವಾಗುವ ಹಿನ್ನೆಲೆಯಲ್ಲಿ ಈ ಶಾಖೆಯಲ್ಲಿನ ವಿಶೇಷಾಧಿಕಾರಿ (ವಿಶ್ವಬ್ಯಾಂಕ್) ಹುದ್ದೆಯಿದ್ದು ಸಹಾ ವಿಶೇಷಾಧಿಕಾರಿ (ತಾಂತ್ರಿಕ-4) ಎಂದು ಬದಲಾಯಿಸುವಂತೆ ಜಲಸಂಪನ್ಮೂಲ ಇಲಾಖೆಯು ಕೋರಿದೆ.

**ಸರ್ಕಾರದ ಆದೇಶ ಸಂ : ಸಿಆಸುಇ 190 ಸಅಸೇ 2010, ಬೆಂಗಳೂರು, ದಿನಾಂಕ : 24-04-2010**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಜಲಸಂಪನ್ಮೂಲ ಇಲಾಖೆಯ **"ವಿಶೇಷಾಧಿಕಾರಿ (ವಿಶ್ವಬ್ಯಾಂಕ್)"** ಹುದ್ದೆಯ ಪದನಾಮವನ್ನು ತಕ್ಷಣದಿಂದ ಜಾರಿಗೆ ಬರುವಂತೆ "ವಿಶೇಷಾಧಿಕಾರಿ (ತಾಂತ್ರಿಕ-4)" ಎಂದು ಮರುಪದನಾಮೀಕರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಎಸ್. ಶಿವರಾಮ್),**

ಪಿ.ಆರ್. 1164 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಜನಸ್ಪಂದನ ಕೋಶ) ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ** :

1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 51 ಸಸಿವಿ 03, ದಿನಾಂಕ 17.06.2003.
2) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 51 ಸಸಿವಿ 03, ದಿನಾಂಕ 23.12.2003.
3) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 24 ಸಸಿವಿ 06, ದಿನಾಂಕ 20.03.2006.
4) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 30 ಸಸಿವಿ 07, ದಿನಾಂಕ 21.05.2007.
5) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 543 ಸಅಸೇ 2007, ದಿನಾಂಕ 11.06.2008.
6) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಜನಸ್ಪಂದನ) ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಡಿಪಿಎಆರ್/ಪಿಎಸ್/ಜೆಎಸ್/69/2010 ದಿನಾಂಕ 29-03-2010.

**ಪ್ರಸ್ತಾವನೆ :**

ಮೇಲೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಧಾನ ಕಾರ್ಯದರ್ಶಿ (ಸಾರ್ವಜನಿಕ ದೂರುಗಳು) ಹುದ್ದೆಯನ್ನು ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಎರಡು ವರ್ಷಗಳ ಅವಧಿಗೆ ಸೃಜಿಸಲಾಗಿದ್ದು ಹಾಗೂ ಕಾಲಕಾಲಕ್ಕೆ ಈ ಹುದ್ದೆಗಳನ್ನು ಮುಂದುವರಿಸಿ, ಮೇಲೆ ಕ್ರಮಸಂಖ್ಯೆ (5) ರಲ್ಲಿ ಓದಲಾದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ : 26-05-2008 ರಿಂದ 2 ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಮೇಲೆ (6) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿ (ಜನಸ್ಪಂದನ) ಹಾಗೂ ಪೂರಕ ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಲಾಗಿದೆ. ಹುದ್ದೆಗಳನ್ನು ಖಾಯಂಗೊಳಿಸಲು ಆರ್ಥಿಕ ಇಲಾಖೆಯ ಸಹಮತಿ ಪಡೆದು ಕ್ರಮಕೈಗೊಳ್ಳಬೇಕಾಗಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ : ಸಿಆಸುಇ 212 ಸಅಸೇ 2010, ಬೆಂಗಳೂರು, ದಿನಾಂಕ : 26-04-2010**

ಕರ್ನಾಟಕ ಸರ್ಕಾರದ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿ (ಜನಸ್ಪಂದನ ಕೋಶ) ಹುದ್ದೆ ಹಾಗೂ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ 26-05-2010 ರಿಂದ ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಆಪ್ತ ಕಾರ್ಯದರ್ಶಿ ಗ್ರೇಡ್-2/ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2. | ಪತ್ರಾಂಕಿತ ಆಪ್ತ ಸಹಾಯಕ/ಹಿರಿಯ ಶೀಘ್ರಲಿಪಿಗಾರ | 1 ಹುದ್ದೆ |

| | | |
|---|---|---|
| 3. | ಶಾಖಾಧಿಕಾರಿ/ಹಿರಿಯ ಸಹಾಯಕ | 1 ಹುದ್ದೆ |
| 4. | ಶೀಘ್ರಲಿಪಿಗಾರರು | 1 ಹುದ್ದೆ |
| 5. | ಕಿರಿಯ ಸಹಾಯಕ | 1 ಹುದ್ದೆ |
| 6. | ದಲಾಯತ್ | 2 ಹುದ್ದೆಗಳು |
| 7. | ವಾಹನ ಚಾಲಕ | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್.ಡಿ. 1 ಟಿಎಫ್‌ಪಿ 96, ದಿನಾಂಕ 10-07-1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಎಸ್. ಶಿವರಾಮ್),**

ಪಿ.ಆರ್. 1165

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲ್ಲೂಕು ಬಳಗಾನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರ ದಿನಾಂಕ : 15/12/2009ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009-10/7454.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ, ಇವರು ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ಬಳಗಾನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬಳಗಾನೂರು ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.74,03,091-00 ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 30-01-1997
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 04-12-1991

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಮುದ್ದೇಬಿಹಾಳ ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ : ಆರ್‌ಡಿ : 980 ಎಲ್‌ಸಿಬಿ 2009 ದಿನಾಂಕ 07-05-2009 ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ ಪ್ರಕರಣ ಸಂ. | ಖಳಗಾನೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 91/01 | 279/2ಅ | 0-22 | 346904 |
| 2 | 92/01 | 279/2ಬ | 0-30 | 472934 |

| | | | | |
|---|---|---|---|---|
| 3 | 93/01 | 278/2 | 5–09 | 2287853 |
| 4 | 95/01 | 282/1ಬ/2 | 4–00 | 1751539 |
| 5 | 96/01 | 282/1ಬ/ಎ | 3–26 | 1598310 |
| 6 | 105/01 | 279/2ಕ | 1–20 | 945551 |
| ಒಟ್ಟು | | | | **7403091** |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯವು ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ : ಸನೀಇ 10 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 29–04–2010**

ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲ್ಲೂಕು ಬಳಗಾನೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಬಳಗಾನೂರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ನ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ.74,03,091–00 ಗಳನ್ನು (ಎಪ್ಪತ್ತನಾಲ್ಕು ಲಕ್ಷದ ಮೂರು ಸಾವಿರದ ತ್ತೊಂಬತ್ತೊಂದು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್.ಡಿ. 1 ಟಿಎಫ್‌ಪಿ 2008, ದಿನಾಂಕ 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಸುಧಾಕರ ಶೆಟ್ಟಿ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1166

## ಜಲಸಂಪನ್ಮೂಲ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಸನೀಇ 10 ಅಪಿಬಂ 2009, ಬೆಂಗಳೂರು, ದಿನಾಂಕ 30–04–2010.**

ದಿನಾಂಕ 13–04–09 ರಂದು ಹೊರಡಿಸಲಾಗಿರುವ ಆದೇಶ ಸಂಖ್ಯೆ : ಸನೀಇ 10 ಅಪಿಬಂ 2009 ರಲ್ಲಿ ವಿಷಯ ಪ್ರಸ್ತಾವನೆ ಹಾಗೂ ಆದೇಶ ಭಾಗದಲ್ಲಿ **"ಮುದ್ದೇಬಿಹಾಳ ತಾಲ್ಲೂಕು"** ಎಂಬುದರ ಬದಲಾಗಿ **"ಸಿಂಧಗಿ ತಾಲ್ಲೂಕು"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಸುಧಾಕರ ಶೆಟ್ಟಿ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1167

**FOREST, ECOLOGY AND ENVIRONMENT SECRETARIAT**

**Sub :** Implementation of the Scheduled Tribes and Other Traditional Forest Dwellers (Recognition of Forest Rights) Act 2006 & Rules 2008 - - Process of verifying the claims by Forest Rights Committee.

**Read :** 1. Proceedings of the meeting held on 28-02-2010 in the chamber of the Chief Secretary to Government of Karnataka with regard to the implementation of the Scheduled Tribes and Other Traditional Forest Dwellers (Recognition of Forest Rights) Act 2006 & Rules 2008.

2. Proceedings of the meeting held on 13-01-2010 and 30-03-2010 under the chairpersonship of Principal Secretary to Government, Forest, Ecology and Environment with regard to the implementation of the Scheduled Tribes and Other Traditional Forest Dwellers (Recognition of Forest Rights) Act 2006 & Rules 2008.

3. Government Order No. SWD 19 PAVAYO 2008 (P), dated : 02-04-2008.

**Preamble:**

Government of India had notified the Scheduled Tribes and Other Traditional Forest Dwellers (Recognition of Forest Rights) Act, 2006 along with the Rules, 2008 so as to recognize the rights traditionally enjoyed by the forest dwelling Scheduled Tribes, who are occupying the forest lands before 13$^{th}$ day of December, 2005 and Other Traditional Forest dwellers who are occumnpying the forest land for three generations (One generation is equal to 25 years) before the 13$^{th}$ day of December, 2005.

2. As provided under Rule 12 "Process of verifying claims by Forest Rights Committee and sub-rule (1) of the said rules the Forest Rights Committee shall, after due intimation to the concerned claimant and the Karnataka Forest Department, visit the site and Physically verify the nature and extent of the claim and evidences on the site, receive any further evidences etc., In this context, it is appropriate and essential to notify the official to represent the Karnataka Forest Department for the purpose of this Rule.

3. Hence the following Order :

**GOVERNMENT ORDER NO. FEE 149 FWL 2008, BANGALORE, DATED 29-04-2010**

In the circumstances explained in the preamble, the Government is hereby appoints the jurisdictional Range Forest Officers to represent Karnataka Forest Department for the purpose of Rule 12(1) of Scheduled Tribes and Other Traditional Forest Dwellers (Recognition of Forest Rights) Rules, 2008.

By Order and in the name of the Governor of Karnataka,

**(P.R. KALAVATHI),**

Under Secretary to Government,

P.R.No. 1168 Forest, Ecology & Environment Department.

**FOREST, ECOLOGY AND ENVIRONMENT SECRETARIAT**

**Sub :** Implementation of the Scheduled Tribes and Other Traditional Forest Dwellers (Recognition of Forest Rights) Act 2006 & Rules 2008 - - Process of verifying the claims by Forest Rights Committee.

**Read :** 1. Proceedings of the meeting held on 28-02-2010 in the chamber of the Chief Secretary to Government of Karnataka with regard to the implementation of the Scheduled Tribes and Other Traditional Forest Dwellers (Recognition of Forest Rights) Act 2006 & Rules 2008.

2. Proceedings of the meetings held on 13-01-2010 and 30-03-2010 under the chairpersonship of Principal Secretary to Government, Forest, Ecology and Environment with regard to the implementation of the Scheduled Tribes and Other Traditional Forest Dwellers (Recognition of Forest Rights) Act, 2006 & Rules 2008.

3. Direction from the Secretary to Government, Social Welfare Department to the Deputy Commissioners vide his D.O. letter No. SWD 20 PAVAYO 2009, dated : 18-01-2010.

4. Government Order No. FEE 149 FWL 2008, Dt : 29-04-2010.

5. Orders No. SWD 19 PAVAYO 2008 (P), Bangalore, dated : 02-04-2008.

**Preamble:**

Government of India had notified the Scheduled Tribes and Other Traditional Forest Dwellers (Recognition of Forest Rights) Act, 2006 along with the Rules, 2008 so as to recognize the rights over the land to the forest dwelling scheduled tribes, who are occupying the forest land before 13th day of December, 2005 and Other Traditional Forest dwellers who are occupying the forest land for three generations (One generation is equal to 25 years) before the 13th day of December, 2005.

2. As provided under Rule 12 "Process of verifying claims by Forest Rights Committee and sub-rule (1)(e), the Forest Rights Committee shall, after due intimation to the concerned claimant and the Forest Department, prepare a map delineating the area of each claim indicating recognizable landmarks. In the light of the proceedings of the meeting chaired by Chief Secretary to Government read at (1) above and the directions issued by the Secretary to Government, Social Welfare Department to the Deputy Commissioners read at (3) above, the process of preparing a map delineating the area of each claim indicating recognizable landmarks needs to be defined.

3. It is essential to notify the process of preparation of the map of each claim in order to ensure uniformity in preparation of map ascertain the correctness of claim and help the Gram Sabha, Sub Divisional and District Level Committee to arrive at a correct decision with regard to the said claim.

4. Hence the following Order :

**GOVERNMENT ORDER NO. FEE 149 FWL 2008, BANGALORE, DATED 29-04-2010**

In the circumstances explained in the preamble and as provided under Sub-Rule (1)(e) of Rule 12 of the Scheduled Tribes and Other Traditional Forest Dweller (Recognition of Forest Rights) Act, 2006 & Rules, 2008, the Government is here by ordered to follow the following instructions/directions while processing to verify the claims by Forest Rights Committees ;

1. The survey in order to prepare map delineating the area of each claim, as per the directions of the Deputy Commissioner, shall be carried out in the presence of the jurisdictional Range Forest Officer / Forester.
2. The jurisdictional Range Forest Officer/Forester shall record on the map of each claim and coordinates (Latitude and Longitude in Indo Bangladesh datum) using a GPS, of each of the corner points of the surveyed area.
3. The map of each claim shall be attested among others, by the jurisdictional Range Forest Officer and the Jurisdictional Forester.
4. In order to ascertain the correctness of the claim and the map so generated, the Sub Divisional Committee may use the tools of geo informatics.

By Order and in the name of the Governor of Karnataka,

**(P.R. KALAVATHI),**

Under Secretary to Government,

P.R.No. 1169 Forest, Ecology & Environment Department.

**FOREST, ECOLOGY & ENVIRONMENT SECRETARIAT**

**Sub :** Diversion of 74.86 ha. of forest land for the purpose of mining at Sy.No.1 of Kudrekanive Kaval Village of Kudrekanive Reserve Forest of Hosadurga Range, Chitradurga District in favour of Sri. M.Srinivasalu, Bellary, Karnataka.

**Read :** 1) Letter No. A5 (1) MNG.CR.9/07-08, dated : 06-02-2008 of the Principal Chief Conservator of Forests, Bangalore.

2) State Government letter No. FEE 18 FFM 2008, dated : 03-04-2008.

3) Government of India Ministry of Environment and Forests, New Delhi letter No. F.No. 8-27/2008-FC, dated 22-10-2008.

4) Letter No. A5 (1) MNG.CR.9/07-08, dated 13-03-2009 of the Principal Chief Conservator of Forests, Bangalore.

5) State Government letter No. FEE 18 FFM 2008, dated 15-12-2009.

6) Government of India Ministry of Environment and Forests, New Delhi letter No. F.No. 8-27/2008-FC, dated 31-03-2010.

**Preamble:**

The Principal Chief Conservator of Forests had sent proposal vide in his letter dated : 06-02-2008 read at (1) above for diversion of 74.86 ha. of forest land for the purpose of mining at Sy.No.1 of Kudrekanive Kaval Village of Kudrekanive Reserve Forest of Hosadurga Range, Chitradurga District in favour of Sri. M.Srinivasalu, Bellary subject to certain conditions.

The proposal of the Principal Chief Conservator of Forests was recommended to Government of India, Ministry of Environment and Forests, New Delhi vide State Government letter dated : 03-04-2008 read at (2) above seeking prior approval of Government of India under Section 2 of The Forest (Conservation) Act, 1980.

After careful consideration of the proposal of the State Government, Government of India vide its letter dated : 22-10-2008 read at (3) above has agreed in-principle (Stage-I) subject to the fulfillment of certain conditions.

In compliance of the conditions stipulated by Government of India vide its letter dated : 22-10-2008 the Principal Chief Conservator of Forests vide in his letter dated : 13-03-2009 read at (4) above has sent his compliance report. This compliance report was forwarded to Government of India vide State Government letter dated : 15-12-2009 read at (5) above.

Government of India vide its letter dated 31-03-2010 read at (6) above has conveyed its final approval (Stage-II) under Section 2 of the Forest (Conservation) Act, 1980 for diversion 74.86 ha. of forest land for the purpose of mining at Sy.No. 1 of Kudrekanive Kaval Village of Kudrekanive Reserve Forest of Hosadurga Range, Chitradurga District in favour of Sri. M.Srinivasalu, Bellary subject to certain conditions.

Hence the Order.

**GOVERNMENT ORDER NO. FEE 18 FFM 2008, BANGALORE, DATED 24-04-2010**

In the circumstances explained above, Government is pleased to accord sanction under Section 2 of the Forest (Conservation) Act, 1980 for diversion of 74.86 ha. of forest land for the purpose of mining at Sy.No. 1 of Kudrekanive Kaval Village of Kudrekanive Reserve Forest of Hosadurga Range, Chitradurga District in favour of Sri. M.Srinivasalu, Bellary subject to the following conditions.

1. Legal status of forest land shall remain unchanged.
2. Compensatory afforestation shall be raised and maintained by the State Forest Department at the project cost on equivalent non-forest land as envisaged.
3. Wherever possible and technically feasible, the User Agency shall undertake afforestation measures in the blanks within the lease area, as well as along the roads outside the lease area diverted under this approval, in consultation with the State Forest Department at the project cost.
4. De-silting of the village tanks falling within 5 Kms radius from the lease boundary shall be taken up by the user agency at regular intervals.
5. Following activities shall be undertaken by the User Agency at the project cost :
   - (i) Proper mitigative measures to minimize soil erosion and choking of streams shall be prepared and implemented.
   - (ii) Planting of adequate drought hardy plant species and sowing of seeds to arrest soil erosion.
   - (iii) Construction of check dams, retention/toe walls to arrest sliding down of the excavated material along the contour along all the decks of the overburdens.

(iv) The areas shall be reclaimed keeping in view the international practice of stabilizing the dumps by grading/benching so that angles of repose (normally less than $28^{o}$ at given place) are maintained.

(v) The top soil management plan should be strictly adhered to.

6. Any tree felling shall be done only when it is absolutely necessary and unavoidable, and that too under strict supervision of the State Forest Department. The non-forest land proposed for Compensatory Afforestation should be transferred and mutated in the name of Forest Department and should be declared as Reserved Forests/Protected forests within six months.
7. The period of permission for lease under the Forest (Conservation) Act, 1980 will be for 20 years subject to and co-terminus with possession of valid lease by User Agency under the MMDR Act, 1957.
8. No damage to the flora and fauna of the area shall be caused.
9. It shall be ensured that no labour-camps are set up inside the forest area.
10. The lease area shall be demarcated on ground at the project cost.
11. The forest land shall not be used for any purpose other than that specified in the proposal.
12. The mitigative measures suggested by the State Wildlife Department and Forest Department shall be implemented at user agency's cost.
13. The User Agency shall implement the approved plan for Resettlement and Rehabilitation of the project affected families at the Project Cost. The implementation of the R & R plan shall be periodically monitored by the Regional Office, Ministry of Environment and Forests, Bangalore and a report thereon shall be submitted periodically.
14. All other conditions stipulated by the State Government of Karnataka at the time of submission of the project proposal to the Central Government, shall be complied with by the User Agency.
15. Any other condition that the CCF (Central) ; Regional Office, Bangalore ; may impose from time to time for the protection and improvement of flora and fauna in the forest area.
16. All other conditions under different rules, regulations and guidelines including environmental clearance and the Scheduled Tribes and other Traditional Forest Dwellers (Recognition of Forest Rights) Act, 2006 shall be complied with before transfer of forest land.
17. The lessee shall pay usual lease rent and other charges as prescribed by the Govt. from time to time.
18. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.
19. The lessee shall carryout soil and water conservation measures and other necessary measures as advised by the Forest Department from time to time.
20. The lessee shall undertake to protect rigidly the leased area and forest area surrounding the area up to one Km. from the leased area.
21. The lessee shall not cut any trees without prior permission of the Forest Department and all produce of permitted felling shall be handed over to Forest Department under cover of receipt.
22. The lessee shall abide by all the conditions prescribed by Govt. of India and Govt. of Karnataka.
23. The lessee shall execute an agreement with the Forest Dept. binding himself to abide by all usual conditions and terms as per orders of the Govt. as well as Principal Chief Conservator of Forests.
24. The lessee shall take-up the planting work on the static dumps during the advance mining operations.

25. In case of violation of agreement conditions, the State Government (Department of Forests, Ecology and Environment) shall have right to suspend the mining activities.
26. The lessee shall reclaim the area 74.86 ha before handing over to Forest Department.
27. Lessee has to pay extraction cost to Forest Department for felling of trees in the mining leased area.
28. The lessee has to pay all the dues against him before the end of lease period including reclamation and rehabilitation charges.
29. The user agency shall submit the reclamation and rehabilitation plan after in principal approval, if not submitted so with a undertaking that amount fixed by Forest Department/Director, Dept. of Mines and Geology/IBM shall be deposited to Forest Department on demand Review for rehabilitation and reclamation will be carried out on 5th, 10th, 15th, and 19th year and if found unsatisfactory then the permission granted under Forest (Conservation) Act 1980 will be revoked by the Government of Karnataka.
30. The lessee has to pay the cost of compensatory afforestation charges, Net Present Value, cost of safety zone, reclamation and land lease rent as per rules in force and Compensatory Afforestation Charges as per revised Government Order vide No.FEE 242 FAP 09, dated : 08-01-2010.
31. Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

By Order and in the name of the Governor of Karnataka,

**(H.M. MALLIKARJUNA SWAMY)**

Under Secretary to Government,

Forest, Ecology & Environment Department.

P.R.No. 1170

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ** : ಗುಲ್ಬರ್ಗಾ ನಗರದಲ್ಲಿ ಶರಣ ಬಸವೇಶ್ವರ ಅನುಭವ ಮಂಟಪ ನಿರ್ಮಿಸುವ ಬಗ್ಗೆ.

**ಉಲ್ಲೇಖ** : 1) ಸಚಿವ ಸಂಪುಟದ ನಿರ್ಣಯ ಸಂಖ್ಯೆ 423/2009, ದಿನಾಂಕ 26-08-2009

2) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ : ಕಸನಿ 11 ಸ.ಭ. 2009-10, ದಿನಾಂಕ 8-10-2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 26-08-2009ರ ಸಚಿವ ಸಂಪುಟ ನಿರ್ಣಯದಲ್ಲಿ ಗುಲ್ಬರ್ಗಾ ನಗರದಲ್ಲಿ ಶ್ರೀ ಶರಣ ಬಸವೇಶ್ವರ ಅನುಭವ ಮಂಟಪ ನಿರ್ಮಿಸಲು ಉದ್ದೇಶಿಸಿದ್ದು, ಅದಕ್ಕೆ 2010-11ನೇ ಸಾಲಿಗೆ ರೂ. 1.00 ಕೋಟಿ ಧನ ಸಹಾಯ ನೀಡಲು ಸಚಿವ ಸಂಪುಟವು ನಿರ್ಧರಿಸಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 08-10-2009ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಗುಲ್ಬರ್ಗಾ ನಗರದಲ್ಲಿ ನಿರ್ಮಿಸಲು ಉದ್ದೇಶಿಸಿರುವ ಶರಣ ಬಸವೇಶ್ವರ ಅನುಭವ ಮಂಟಪಕ್ಕೆ ರೂ. 100.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರಿಗೆ ಬಿಡುಗಡೆ ಮಾಡಿ ಆದೇಶ ಹೊರಡಿಸಲು ವಿನಂತಿಸಿರುತ್ತಾರೆ. ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-102-4-31-059 (ಯೋಜನೆ) ಹೊಸ ಜಿಲ್ಲೆಗಳಲ್ಲಿ ರಂಗಮಂದಿರ ನಿರ್ಮಾಣ ಶೀರ್ಷಿಕೆಯಡಿ ಹೆಚ್ಚುವರಿಯಾಗಿ ಒದಗಿಸಿಕೊಂಡು ರೂ. 100.00 ಲಕ್ಷಗಳ ಅನುದಾನವನ್ನು ಭರಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ.

ಗುಲ್ಬರ್ಗಾ ನಗರದಲ್ಲಿ ಶರಣ ಬಸವೇಶ್ವರ ಅನುಭವ ಮಂಟಪ ನಿರ್ಮಿಸಲು ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 69 ಸ್ಮಾಪ್ರನಿ 2009, ಬೆಂಗಳೂರು, ದಿನಾಂಕ: 3ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ನಗರದಲ್ಲಿ ಶರಣ ಬಸವೇಶ್ವರ ಅನುಭವ ಮಂಟಪ ನಿರ್ಮಿಸಲು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ಸರ್ಕಾರದಿಂದ ರೂ. 100.00 (ರೂಪಾಯಿ ನೂರು ಲಕ್ಷಗಳು ಮಾತ್ರ) ಲಕ್ಷಗಳ ಅನುದಾನವನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರಿಗೆ ಬಿಡುಗಡೆ ಮಾಡಿದೆ.

**ಷರತ್ತುಗಳು :**

1) ಕಾಮಗಾರಿಯ ಅಂದಾಜು ಪಟ್ಟಿಗೆ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆಯನ್ನು ಪಡೆದು ಕಾಮಗಾರಿ ಕೈಗೊಳ್ಳುವುದು.
2) ಕಾಮಗಾರಿಯನ್ನು ಟೆಂಡರ್ ಕರೆದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ನ್ನು ಅನುಸರಿಸುವುದು.
3) ಕಾಮಗಾರಿಯನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ ಇವರ ಮೇಲುಸ್ತುವಾರಿಯಲ್ಲಿ ಕೈಗೊಳ್ಳುವುದು.

ಈ ಅನುದಾನವನ್ನು 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–102–4–31–059 (ಕನ್ನಡ ಮತ್ತು ಸಂಸ್ಕೃತಿಗೆ ಉತ್ತಾಹ) ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 08–04–2010ರ ಟಿಪ್ಪಣಿ ಸಂಖ್ಯೆ ಆಇ 212 ವೆಚ್ಚ–7/2010 ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1202

ಕನ್ನಡ ಮತ್ತು ಸಂಸ್ಕೃತಿ,

ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಇಂಧನ ಸಚಿವಾಲಯ

**ವಿಷಯ** : ಮೆ॥ ಕಪಿಲ ಮಂಜುಶ್ರೀ ಇವರಿಗೆ 4.00 ಮೆಗಾವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ** : 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್ಇಡಿ/06/ಕೋಟೆ ಮಲೆ ಎಂ.ಹೆಚ್.ಎಸ್/ 09/2396 ದಿನಾಂಕ 3/4–8–2009 ಮತ್ತು ಸಂಖ್ಯೆ : ಕೆಆರ್ಇಡಿ/06/ಕೋಟೆಮಲೆ ಕಿ.ಜ.ವಿ/2010/822 ದಿನಾಂಕ : 22/24–03–2010.

2) ದಿನಾಂಕ 26–03–2010 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು Director, M/s Yeses Retail Ventures Private Limited ಇವರ ಪತ್ರ ದಿನಾಂಕ 26–04–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Yeses Retail Ventures Private Limited ಇವರಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ತಣ್ಣಿಮನಿ ಗ್ರಾಮದ ಬಳಿ ಭಾಗಮಂಡಲ ಪಟ್ಟಣದ ಕೋಟೆಮಲೆ ಎಸ್ಟೇಟ್‌ನ ಮುಖಾಂತರ ಹರಿಯುವ 3 ತೊರೆಗಳಿಗೆ ಅಡ್ಡಲಾಗಿ 4.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 26–03–2010 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Yeses Retail Ventures Private Limited ಇವರಿಗೆ 4.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ನಿರ್ದೇಶಕರು M/s Yeses Retail Ventures Private Limited ಇವರು ಉದ್ದೇಶಿತ ಯೋಜನೆಯ ಜಮೀನು ಕಪಿಲ ಮಂಜುಶ್ರೀ ಹೆಸರಿನಲ್ಲಿ ಇರುವುದರಿಂದ ಈ ಯೋಜನೆಯನ್ನು ಮೆ॥ ಕಪಿಲ ಮಂಜುಶ್ರೀ ಇವರ ಹೆಸರಿನಲ್ಲಿ ಹಂಚಿಕೆ ಮಾಡಬೇಕೆಂದು ಕೋರಿರುತ್ತಾರೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 453 ಎನ್‌ಸಿಇ 2009, ಬೆಂಗಳೂರು, ದಿನಾಂಕ: 30–04–2010**

ಮೆ॥ ಕಪಿಲ ಮಂಜುಶ್ರೀ ಇವರಿಗೆ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ತಣ್ಣಿಮನಿ ಗ್ರಾಮದ ಬಳಿ ಭಾಗಮಂಡಲ ಪಟ್ಟಣದ ಕೋಟೆಮಲೆ ಎಸ್ಟೇಟಿನ ಮುಖಾಂತರ ಹರಿಯುವ 3 ತೊರೆಗಳಿಗೆ ಅಡ್ಡಲಾಗಿ 4.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir-1 Latitude : 12°24'58" Longitude : 75°29'24" Weir-2 Latitude : 12°24'58" Longitude : 75°28'47" Weir-3 Latitude : 12°24'52" Longitude : 75°28'28" Power House Latitude 12°25'47" Longitude : 75°27'09") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2,3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 1203

## ENERGY SECRETARIAT

**CORRIGENDUM**

No. EN 29 PPC 2010, Bangalore, Dated 03-05-2010

The words "April & May 2010" appearing in the second line of para 4 of the preamble portion and in the third line of para 1 of the order portion of the Government Order No. EN 29 EEB 2010 dated 6th April 2010 **shall be substituted by the following "April, May and June 2010"**

The date and month mentioned in the second line of para 5 of the Order portion of the above said Government Order as **"31st May 2010" shall be substituted by the following "30th June 2010".**

By Order and in the name of the Governor of Karnataka

**S. J. SAMPATH KUMAR**
Under Secretary to Govt.
Energy Department

P.R. 1204

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ** : ಶ್ರೀಮತಿ ಎಸ್. ಇಂದುಮತಿ, ಸರ್ಕಾರದ ಉಪ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರು ನವದೆಹಲಿಯಲ್ಲಿ ನಡೆಯಲಿರುವ "National Project Committee on the Enforcement of Cyber Law" ಸಮ್ಮೇಳನದಲ್ಲಿ ದೆಹಲಿಗೆ ಭಾಗವಹಿಸುವ ಕುರಿತು.

**ಓದಲಾಗಿದೆ** : 1) ಚೇರ್‌ಪರ್ಸನ್, ಸೈಬರ್ ಅಪ್ಲೈಟ್ ಟ್ರಿಬುನಲ್, ಮಾಹಿತಿ ತಂತ್ರಜ್ಞಾನ ಇಲಾಖೆ, ನವದೆಹಲಿ, ಇವರ ಪತ್ರ ದಿನಾಂಕ 01–04–2010 ಮತ್ತು 23–04–2010.
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ : ಐಟಿಡಿ/09/ಪಿಆರ್‌ಎಂ/2010 ದಿನಾಂಕ 21–04–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 01–04–2010ರ ಚೇರ್ ಪರ್ಸನ್, ಸೈಬರ್ ಅಪ್ಲೈಟ್ ಟ್ರಿಬುನಲ್, ಮಾಹಿತಿ ತಂತ್ರಜ್ಞಾನ ಇಲಾಖೆ, ನವದೆಹಲಿ. ಇವರ ಪತ್ರದಲ್ಲಿ ದಿನಾಂಕ 08–05–2010 ರಂದು ಸಿಂಫೋಸಿಯಮ್ ಹಾಲ್, ಎನ್.ಎ.ಎಸ್.ಸಿ.

ಪೂಸ. ಇಲ್ಲಿ ನಡೆಯುವ National Project Committee on Enforcement of Cyber Law ಗೆ ಸಂಬಂಧಪಟ್ಟ National Seminar ನಲ್ಲಿ ಭಾಗವಹಿಸಲು ಓದಲಾದ ದಿನಾಂಕ 21–04–2010ರ ಪತ್ರದಲ್ಲಿ ಅಧಿಕಾರಿಯನ್ನು ನಿಯೋಜಿಸಲು ನಿರ್ದೇಶಿಸಿರುತ್ತಾರೆ.

ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 09 ಪಿಆರ್ಎಂ 2010, ಬೆಂಗಳೂರು, ದಿನಾಂಕ: 04–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀಮತಿ ಎಸ್. ಇಂದುಮತಿ, ಸರ್ಕಾರದ ಉಪ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರನ್ನು ದಿನಾಂಕ 08–05–2010 ರಂದು ಸಿಂಫೋಸಿಯಮ್ ಹಾಲ್, ಎನ್.ಎ.ಎಸ್.ಸಿ. ಪೂಸ, ಇಲ್ಲಿ ನಡೆಯುವ National Seminar on Enforcement of Cyber Law ನಲ್ಲಿ ಭಾಗವಹಿಸಲು ನಿಯೋಜಿಸಲಾಗಿದೆ.

ಸದರಿ ಅಧಿಕಾರಿಯು ದಿನಾಂಕ 07–05–2010 ರಂದು ಕೇಂದ್ರ ಸ್ಥಾನ ಬಿಟ್ಟು ದಿನಾಂಕ 09–05–2010 ರಂದು ಕೇಂದ್ರ ಸ್ಥಾನಕ್ಕೆ ಹಿಂದಿರುಗುವಂತೆ ಆದೇಶಿಸಿದೆ, ಮತ್ತು ಸದರಿ ಅಧಿಕಾರಿಯ ಪ್ರವಾಸದ ಅವಧಿಯ ಗೈರುಹಾಜರಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸಿ, ಅಧಿಕಾರಿಯವರು ಪ್ರವಾಸದ ಅವಧಿಗೆ ನಿಯಮಾನುಸಾರ ಸಾರಿಗೆ ಭತ್ಯೆ, ದಿನ ಭತ್ಯೆ ಇತ್ಯಾದಿಗಳಿಗೆ ಅರ್ಹರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಮ್. ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 1205

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ** : ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ನೌಕರರ ಸೇವೆಯನ್ನು ಕೇಂದ್ರದಲ್ಲಿ ವಿಲೀನಗೊಳಿಸುವ ಬಗ್ಗೆ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ** : ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ನಿರ್ದೇಶಕರ ಪತ್ರದ ಸಂಖ್ಯೆ ಕರಾದೂಸಂಅಕೇಂ/63 ಜಿಇಎನ್ 2010, ದಿನಾಂಕ 17–4–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ನಿರ್ದೇಶಕರ ದಿನಾಂಕ 17–4–2010ರ ಪತ್ರದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಅಡಿಯಲ್ಲಿ ಬರುವ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ನೌಕರರ ಸೇವೆಯನ್ನು ಸದರಿ ಕೇಂದ್ರದಲ್ಲಿ ವಿಲೀನಗೊಳಿಸುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ವರದಿ ನೀಡಲು ಉಪಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಹಾಗೂ ಆರ್ಥಿಕ ಇಲಾಖೆ ಕಾನೂನು ಇಲಾಖೆ ಮತ್ತು ಸಿ.ಆ.ಸು.ಇ. (ಸೇವಾ ನಿಯಮಗಳು) ಇಲಾಖೆಗಳಲ್ಲಿನ ಉಪ ಕಾರ್ಯದರ್ಶಿಯವರ ಹುದ್ದೆಯ ಶ್ರೇಣಿಗೆ ಕಡಿಮೆಯಿಲ್ಲದ ಸದಸ್ಯರುಗಳು ಮತ್ತು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ನಿರ್ದೇಶಕರು ಇವರುಗಳನ್ನು ಒಳಗೊಂಡ ಸಮಿತಿಯನ್ನು ರಚಿಸಲು ದಿನಾಂಕ 23–3–2010 ರಂದು ನಡೆದ ಸದರಿ ಕೇಂದ್ರದ ಕಾರ್ಯಕಾರಿಣಿ ಸಮಿತಿಯ ಸಭೆಯಲ್ಲಿ ನಿರ್ಣಯಿಸಿರುವ ಬಗ್ಗೆ ಉಲ್ಲೇಖಿಸುತ್ತಾ, ಸಮಿತಿ ರಚನೆಯ ಕುರಿತು ಆದೇಶ ಹೊರಡಿಸಲು ಕೋರಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 20 ಡಿಐಎಸ್ 2010, ಬೆಂಗಳೂರು, ದಿನಾಂಕ: 04–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ದಿನಾಂಕ 23–3–2010ರಂದು ನಡೆದ ಸದರಿ ಕೇಂದ್ರದ ಕಾರ್ಯಕಾರಿಣಿ ಸಮಿತಿಯ ಸಭೆಯಲ್ಲಿ ನಿರ್ಣಯಿಸಿದಂತೆ ಸದರಿ ಕೇಂದ್ರದಲ್ಲಿನ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ನೌಕರರ ಸೇವೆಯನ್ನು ಸದರಿ ಕೇಂದ್ರದಲ್ಲಿ

ವಿಲೀನಗೊಳಿಸುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರಕ್ಕೆ ವರದಿ ನೀಡಲು ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಶ್ರೀಮತಿ ಎಸ್. ಇಂದುಮತಿ, ಸರ್ಕಾರದ ಉಪ ಕಾರ್ಯದರ್ಶಿ,<br>ಮಾತಂ ಜೈತಂ ಹಾಗೂ ವಿತಂ ಇಲಾಖೆ (ಮಾತಂ ಜೈತಂ ವಿಭಾಗ) | ಅಧ್ಯಕ್ಷರು |
| 2. | ಡಾ॥ ವಿ. ಶ್ರೀಧರ್, ವಿಜ್ಞಾನಿ, ಎಸ್.ಡಿ., ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ | ಸದಸ್ಯ ಕಾರ್ಯದರ್ಶಿ |
| 3. | ಶ್ರೀ ಹೆಚ್. ಗಣೇಶಮೂರ್ತಿ, ಸರ್ಕಾರದ ಉಪ ಕಾರ್ಯದರ್ಶಿ–1, ಆರ್ಥಿಕ ಇಲಾಖೆ | ಸದಸ್ಯರು |
| 4. | ಶ್ರೀ ದೇವರಾಜ್, ಅಧೀನ ಕಾರ್ಯದರ್ಶಿ, ಸಿಆಸುಇ, (ಸೇವಾ ನಿಯಮಗಳು–1) | ಸದಸ್ಯರು |
| 5. | ಶ್ರೀ ಎಂ. ಮಹದೇವಯ್ಯ, ಸರ್ಕಾರದ ಉಪ ಕಾರ್ಯದರ್ಶಿ (ಅಭಿಪ್ರಾಯ–4),<br>ಕಾನೂನು ಮತ್ತು ಮಾನವ ಹಕ್ಕುಗಳ ಇಲಾಖೆ | ಸದಸ್ಯರು |

ಸದರಿ ಸಮಿತಿಯು ಒಂದು ತಿಂಗಳೊಳಗಾಗಿ ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಶ್ರೀ ಎಂ. ವಿ. ಕೃಷ್ಣಮೂರ್ತಿ, ಸರ್ಕಾರದ ಅಧೀನ ಕಾರ್ಯದರ್ಶಿ, ಇವರು ಸರ್ಕಾರದ ಹಂತದಲ್ಲಿ ಒದಗಿಸಲು ಎಲ್ಲಾ ವಿಧದಲ್ಲೂ ಸಹಕರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಮ್. ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 1206

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** 2009–10 ನೇ ಸಾಲಿಗೆ RIDF-XV ರಡಿ ಅನುಮೋದನೆಗೊಂಡಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1) ಪತ್ರ ಸಂಖ್ಯೆ: FD/23/CIF/ 2009 ದಿನಾಂಕ: 15.01.2010.
2) ದಿನಾಂಕ 05.02.2010ರ ನಬಾರ್ಡ್ ಸಂಸ್ಥೆಯ ಪತ್ರ ಸಂಖ್ಯೆ: NB/SPd/2206/RIDF- XV (Karnataka RO) 108 PSC/2009–10

**ಪ್ರಸ್ತಾವನೆ:**

2009–10ನೇ ಸಾಲಿಗೆ ರೂ. 20.00 ಕೋಟಿ ಅಂದಾಜು ಮೊತ್ತದ ಹೆಚ್ಚುವರಿ ಸಣ್ಣ ನೀರಾವರಿ ಕಾಮಗಾರಿಗಳನ್ನು ನಬಾರ್ಡ್ ಸಂಸ್ಥೆಗೆ ಆರ್.ಐ.ಡಿ.ಎಫ್– ೧೫ಗಿ ರಡಿ ಸಾಲ ಮಂಜೂರಾತಿ ಪಡೆಯಲು, ಆರ್.ಐ.ಡಿ.ಎಫ್. ಯೋಜನೆಯಡಿಯಲ್ಲಿ ನಬಾರ್ಡ್‌ನಿಂದ ಸಾಲ ಪಡೆಯಲು ಹಾಗೂ ಯೋಜನೆಗಳನ್ನು ಪರಿಗಣಿಸಲು ರಚಿಸಲಾಗಿರುವ ಸಚಿವ ಸಂಪುಟ ಉಪಸಮಿತಿಯ ಅನುಮೋದನೆಯೊಂದಿಗೆ ಮೇಲೆ ಓದಲಾದ ಉಲ್ಲೇಖ (1) ರ ಆರ್ಥಿಕ ಇಲಾಖೆ ಪತ್ರದಲ್ಲಿ ಕಳುಹಿಸಲಾಗಿದೆ. ಅದರಂತೆ ಅನುಮೋದನೆಯಾಗಿರುವ ಸಣ್ಣ ನೀರಾವರಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ತಯಾರಿಸಿ ಆರ್.ಐ.ಡಿ.ಎಫ್– ೧೫ಗಿರಡಿ ಸಾಲ ಸೌಲಭ್ಯ ಮಂಜೂರಾತಿಗಾಗಿ ಪ್ರಸ್ತಾವನೆಯನ್ನು ಕಳುಹಿಸಲಾಗಿದೆ. ನಬಾರ್ಡ್ ಸಂಸ್ಥೆಯು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆರ್.ಐ.ಡಿ.ಎಫ್–15ರ ಅಡಿಯಲ್ಲಿ ರೂ. 2000.00 ಲಕ್ಷ ಅಂದಾಜು ಮೊತ್ತದ 31 ಕಾಮಗಾರಿಗಳ ಅಂದಾಜುಗಳಿಗೆ ಒಟ್ಟು ರೂ. 1900.00 ಲಕ್ಷ ಸಾಲ ಸೌಲಭ್ಯವನ್ನು ಮಂಜೂರು ಮಾಡಲಾಗಿದೆ.

ನಬಾರ್ಡ್ ಸಂಸ್ಥೆಯು ಸಾಲ ಮಂಜೂರಾತಿಗೆ ಒಪ್ಪಿಗೆ ನೀಡಿರುವ ಮೇಲ್ಕಂಡ 31 ಕಾಮಗಾರಿಗಳ ಪೈಕಿ ಕ್ರಮ ಸಂಖ್ಯೆ 29 ರಲ್ಲಿನ ರೂ. 1048.00 ಲಕ್ಷ ಅಂದಾಜು ಮೊತ್ತದ ಬಾಗಲಕೋಟೆ ಜಿಲ್ಲೆಯ ಕಾತರಕಿ ಹತ್ತಿರ ಬಿ.ಸಿ.ಬಿ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಈಗಾಗಲೇ ಆಡಳಿತಾತ್ಮಕ ಅನುಮೋದನೆ ನೀಡಿರುವ ಕಾರಣ ಇದನ್ನು ಹೊರತು ಪಡಿಸಿ ಇನ್ನುಳಿದ

ರೂ.952.00 ಲಕ್ಷ ಅಂದಾಜು ಮೊತ್ತದ 30 ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 06 ನಯೋಕಾ 2009, ಬೆಂಗಳೂರು, ದಿನಾಂಕ 12ನೇ ಏಪ್ರಿಲ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2009–10 ಸಾಲಿಗೆ ನಬಾರ್ಡ್‌ನ ಆರ್.ಐ.ಡಿ.ಎಫ್.–ಘಿಗಿರಡಿ ಸಾಲ ಮಂಜೂರಾತಿ ದೊರಕಿರುವ ರೂ.952.00 ಲಕ್ಷ (ರೂ ಒಂಬೈನೂರ ಐವತ್ತೆರಡು ಲಕ್ಷ ಮಾತ್ರ) ಅಂದಾಜು ಮೊತ್ತವುಳ್ಳ ಅನುಬಂಧದಲ್ಲಿನ 30 ಕಾಮಗಾರಿಗಳ (ಕ್ರಮಸಂಖ್ಯೆ 29 ಕಾಮಗಾರಿ ಹೊರತು ಪಡಿಸಿ) ಅಂದಾಜುಗಳಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ತಾಂತ್ರಿಕ ಮಂಜೂರಾತಿಯನ್ನು ಸೂಕ್ತವಾದ ಲೆಕ್ಕಶೀರ್ಷಿಕೆ/ಉಪಲೆಕ್ಕಶೀರ್ಷಿಕೆ ನೀಡುವುದು. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪ್ರಸ್ತಾವನೆಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4) ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ಸಣ್ಣ ನೀರಾವರಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಅಥವಾ ಮುಖ್ಯ ಇಂಜಿನಿಯರ್‌ಗಳ ನೇತೃತ್ವದಲ್ಲಿ ಇರುವ ತಾಂತ್ರಿಕ ಸಮಿತಿಯ ತೀರುವಳಿಯನ್ನು ನಿಯಮಾನುಸಾರ ಪಡೆಯುವುದು.
5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
7) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
8) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9) ಕಾವೇರಿ ಕೊಳ್ಳದಲ್ಲಿ ಬರುವ ಯೋಜನೆಗಳ ಅನುಷ್ಠಾನವು ಕಾವೇರಿ ನ್ಯಾಯಾಧಿಕರಣದ ಆದೇಶಗಳಿಗೆ ವ್ಯತಿರಿಕ್ತವಾಗಬಾರದು.
10) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು
11) ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

